# ಪರಿವಿಡಿ





Reprinted from 1952 Edition.

# ಲೇಖಕರ ಅರಿಕೆ

ನನ್ನ ಪ್ರಿಯ ಮಿತ್ರವರ್ಯರಾದ ಶ್ರೀಯುತ ಕುಲಕರಣಿ ಶಂಭುಲಿಂಗಪ್ಪನವರು ಮೇಲಿಂದ ಮೇಲೆ ನನ್ನ ಕಡೆಗೆ ಬಂದು ಕಥಾರೂಪದಲ್ಲೊಂದು ಕರ್ನಾಟಕ ಇತಿಹಾಸವನ್ನು ಬರೆಯಲು ವೈಯಕ್ತಿಕ ಸಲಿಗೆಯಿಂದ ಬಹಳಷ್ಟು ಒತ್ತಾಯಗೊಳಿಸಿ ಹುರಿದುಂಬಿಸಿದರು. ಈ ಚಿಕ್ಕ ಹೊತ್ತಿಗೆಯನ್ನು ಬರೆಯಲು ಅವರು ನನ್ನಲ್ಲಿ ಹುರುಪು ಹುಮ್ಮಸಗಳನ್ನು ತುಂಬಿದ್ದಕ್ಕಾಗಿ ನಾನು ಉಪಕೃತನು.

ಶ್ರೀಯುತ ಶಂಭುಲಿಂಗಪ್ಪನವರಿಂದ ಪ್ರಕಾಶಿತವಾದ **'ಕರ್ನಾಟಕ ಇತಿಹಾಸ ಬೋಧಿನಿ'** ಎಂಬ ಹೊತ್ತಿಗೆಯನ್ನು ಆಧಾರವಾಗಿಟ್ಟುಕೊಂಡು ಈ ಕಥೆಗಳನ್ನು ಬರೆಯಲಾಗಿದೆ. ಆದರೆ ಕೆಲವು ಕಥೆಗಳ ಬಗೆಗೆ ವಿಷಯ ಸಂಗ್ರಹವು ಆದರಲ್ಲಿ ಏನೂ ಸಿಕ್ಕಲಿಲ್ಲ. ಅಂತಹ ಕಥೆಗಳ ಸಂಗತಿಗಳನ್ನು ಬೇರೆ ಹೊತ್ತಿಗೆಗಳಿಂದ ಆಯ್ದುಕೊಳ್ಳಲಾಗಿದೆ. ಆದುದರಿಂದ ಆಯಾ ಹೊತ್ತಿಗೆಗಳ ಲೇಖಕರಿಗೂ ಪ್ರಕಾಶಕರಿಗೂ ನಾನು ತುಂಬಾ ಋಣಿಯಾಗಿರುವೆ. ನಾಲನೆಯ ಇಯತ್ತೆಯ ಮಕ್ಕಳ ಬುದ್ಧಿಮಟ್ಟಕ್ಕನುರೂಪವಾಗುವಂತಹ ತಿಳಿಗನ್ನಡದಲ್ಲಿ ಬರೆಯಲು ಪ್ರಯತ್ನಿಸಿದ್ದಾಗಿದೆ. ಮಕ್ಕಳ ಬುದ್ಧಿಗೆ ನಿಲುಕದಂತಹ ಬಿಗಿ ಶಬ್ದಗಳು ಅಪ್ಪಿತಪ್ಪಿ ಉಳಿದಿರುವ ಸಂಭವವಿದೆ. ಸಹೃದಯರಾದ ಓದುಗರು ದಯವಿಟ್ಟು ನನಗಾಗಲಿ ಇಲ್ಲವೆ ಪ್ರಕಾಶಕರಿಗಾಗಲಿ ಅರುಹಬೇಕೆಂದು ವಿನಂತಿಯು. ಕಥೆಗಳಿಗೆಲ್ಲ ಚನ್ನಾಗಿ ಹದಗೊಳಿಸಿದ ಚಿತ್ರಗಳನ್ನು ಹಾಕಲಾಗಿದೆ. ಅವು ಸುಂದರವಾಗಿಯೂ ಚಿತ್ತಾಕರ್ಷಕವಾಗಿಯೂ ಭಾವಪೂರ್ಣವಾಗಿಯೂ ಇವೆ.

ಪ್ರತಿಯೊಂದು ಕಥೆಯ ಕೊನೆಗೆ ಉಪಯುಕ್ತ ಅಭ್ಯಾಸನಗಳನ್ನು ಜೋಡಿಸಲಾಗಿದೆ ಕ್ರೀಡಾಪದ್ಧತಿಗನುಗುಣವಾಗಿಯೂ ಮಕ್ಕಳ ಬುದ್ಧಿಮಟ್ಟಕ್ಕನುಸರಿಸಿಯೂ ಅವುಗಳನ್ನು ಹೆಣೆಯಲಾಗಿದೆ ವಿದ್ಯಾರ್ಥಿವೇತನ (Scholarship) ಪರೀಕ್ಷೆಗಳಲ್ಲಿಯೂ ಪ್ರಮಾಣಪತ್ರ (Certificate) ಪರೀಕ್ಷೆಗಳಲ್ಲಿಯೂ ಕಂಡುಬರುವ ಪ್ರಶ್ನೆಗಳಂತಹ ಮಾದರಿ ಪ್ರಶ್ನೆಗಳನ್ನು ರಚಿಸಿ ಹೊತ್ತಿಗೆಯ ಕೊನೆಗೆ ಕೊಡಲಾಗಿದೆ. ಒಟ್ಟಾರೆ, ಮಕ್ಕಳಿಗೆ ಈ ಹೊತ್ತಿಗೆಯು ಸರ್ವತೋಮುಖವಾಗಿ ಉಪಯುಕ್ತವಾಗುವದೆಂದು ಹಾರೈಸಲಾಗಿದೆ.

ಹುಬ್ಬಳ್ಳಿ ಹಳೆಯ ಜಕಾತಿ ಕಟ್ಟೆ
ಧಾರವಾಡ
೧೦-೧೨-೧೯೫೦

**ಬ. ಮ ಶಿಂತ್ರಿ, ಬಿ. ಎ., ಬಿ. ಟಿ.**
ರಿಟಾಯರ್ಡ ಆಸಿಸ್ಟಂಟ ಎಜ್ಯುಕೇಶನಲ್
ಇನ್‌ಸ್ಪೆಕ್ಟರ ದಕ್ಷಿಣಭಾಗ, ಧಾರವಾಡ

# ಪ್ರಕಾಶಕರ ನಿವೇದನೆ

"ಕರ್ನಾಟಕ ಐತಿಹಾಸಿಕ ಕಥೆಗಳು" ಎಂಬೀ ಚಿಕ್ಕ ಹೊತ್ತಿಗೆಯನ್ನು ಪ್ರಕಟಿಸಲು ನಮಗೆ ಬಹಳೇ ಸಂತೋಷವಾಗುತ್ತಿದೆ. ಚಿಕ್ಕ ಮಕ್ಕಳಿಗೆ ಇತಿಹಾಸದ ಜ್ಞಾನವನ್ನು ಮಾಡಿಕೊಡುವದು ಅವಶ್ಯವಿದ್ದಷ್ಟೇ ಕಠಿಣವೂ ಆಗಿದೆಯೆಂಬ ಮಾತು ಸುಸ್ಪಷ್ಟವೇ ಇದೆ. ಮುಂದುವರಿದ ರಾಷ್ಟ್ರಗಳಲ್ಲಿ ಇತಿಹಾಸವನ್ನು ಬರೆಯುವ ಮತ್ತು ಕಲಿಸುವ ರೀತಿ-ಪದ್ಧತಿಗಳಲ್ಲಿ ಒಳ್ಳೇ ಪ್ರಗತಿಯಾಗುತ್ತಲಿದೆ. ಚಿಕ್ಕಮಕ್ಕಳ ಮನಸ್ಸನ್ನು ಹಿಡಿಯುವ ಸಾಧನೆಗಳೆಂದರೆ ಕಥೆ, ಸಂಭಾಷಣ, ಅಭಿನಯ ಮೊದಲಾದವುಗಳಾಗಿವೆ.

ಈ ಹೊತ್ತಿಗೆಯಲ್ಲಿ ಕರ್ನಾಟಕದ ಇತಿಹಾಸವನ್ನು ನಾಲ್ಕನೆಯ ಇಯತ್ತೆಯ ಮಕ್ಕಳಿಗಾಗಿ ಇತ್ತೀಚಿಗಿನ ಪದ್ಧತಿಗಳಂತೆ ಸುಲಭವಾಗಿ ಬರೆಯಲು ಯತ್ನ ಮಾಡಲಾಗಿದೆ. ಕರ್ನಾಟಕದಲ್ಲಿ ಹೆಸರಾದ ವೀರರು, ಬುದ್ಧಿಶಾಲಿಗಳು, ಕಲಾವಿದರು, ಧರ್ಮಪ್ರಸಾರಕರು, ಸಮಾಜದ ಕ್ರಾಂತಿಕಾರರು ಮೊದಲಾದವರ ಕಥೆಗಳನ್ನು ಇಲ್ಲಿ ಹೇಳಿದೆ. ಆಯಾ ಶ್ರೇಷ್ಠ ಪುರುಷರು ಸಮಾಜದಲ್ಲಿ ಜನರ ಮೇಲೆ ಎಂತಹ ಪರಿಣಾಮಗಳನ್ನುಂಟು ಮಾಡಿದರೆಂಬುದನ್ನು ಸಂದರ್ಭಾನುಸಾರವಾಗಿ ಸೂಚಿಸಿದೆ. ಬಾಲಕರ ಮನಸಿನ ಮೇಲೆ ವಿಷಯವು ಬಿಂಬಿಸುವಂತೆ ಶಕ್ಯವಿದ್ದಲ್ಲಿ ಸಂಭಾಷಣೆಯ ಶೈಲಿಯನ್ನು ಬಳಿಸಲಾಗಿದೆ.

ಈ ಪುಸ್ತಕವನ್ನು ಬರೆದುಕೊಟ್ಟ ಶ್ರೀಯುತ ಬ. ಮು. ಶಿಂತ್ರಿ, ಬಿ.ಎ., ಬಿ.ಟಿ. ಮತ್ತು ಇದನ್ನು ಸಿದ್ಧಪಡಿಸುವಲ್ಲಿ ಸಹಾಯಮಾಡಿದ ಮಿತ್ರರಿಗೂ ನಾವು ಅತ್ಯಂತ ಋಣಿಯಾಗಿದ್ದೇವೆ. ಈ ಹೊತ್ತಿಗೆಯಲ್ಲಿ ಲೋಪದೋಷಗಳೇನಾದರೂ ಕಂಡುಬಂದಲ್ಲಿ, ಅವುಗಳನ್ನು ದಯವಿಟ್ಟು ನಮಗೆ ಅರುಹಿದರೆ, ನಾವು ಅವುಗಳನ್ನು ಕೃತಜ್ಞತೆಯಿಂದ ಸ್ವೀಕರಿಸುವೆವು. ಮತ್ತು ಮುಂದಿನ ಮುದ್ರಣದಲ್ಲಿ ಸರಿಪಡಿಸಿಕೊಳ್ಳುವೆವು.

ಧಾರವಾಡ
ತಾ|| ೧೦-೧೨-೧೯೫೦

**ಶಂಭುಲಿಂಗಪ್ಪ ಶಿವರುದ್ರಪ್ಪ ಕುಲಕರಣಿ**
ಪ್ರಕಾಶಕರು


ಕರ್ನಾಟಕದ
ನಕಾಶವು
ಪಂಢರಪುರ
ಕಲ್ಯಾಣ
ವಿಜಾಪುರ
ಬಾಗೇವಾಡಿ
ಮುದಗಲ್ಲು
ಬದಾಮಿ
ಪಟ್ಟದಕಲ್ಲು
ಬೆಳಗಾವಿ
ಕಿತ್ತೂರು
ಅಣ್ಣಿಗೇರಿ
ಆನೆಗುಂದಿ
ಬಳ್ಳಾರಿ
ಕಾರವಾರ
ಬಂಕಾಪುರ
ಹಾನಗಲ್ಲು
ಬನವಾಸಿ
ಚಿತ್ರಕಲ್ಲದುರ್ಗ
ರಾಯದುರ್ಗ

# ಕರ್ನಾಟಕದಲ್ಲಿಯ

## ಐತಿಹಾಸಿಕ ಕಟ್ಟಡಗಳು.



# ನಮ್ಮ ತಾಯ್ನಾಡು

ಕನ್ನಡ ನಾಡು ನಮ್ಮೆಲ್ಲರ ತಾಯ್ನಾಡು. ಅದಕ್ಕೆ ಕರ್ನಾಟಕವೆಂದೂ ನಾವು ಕರೆಯುತ್ತೇವೆ. ದ್ರಾವಿಡರು ನಮ್ಮ ನಾಡಿನ ಮೂಲ ನಿವಾಸಿಗಳು. ದ್ರಾವಿಡರ ಸಂಸ್ಕೃತಿಯು ಎಂತಹ ಮಟ್ಟಕ್ಕೆ ಹೋಗಿ ಮುಟ್ಟಿತ್ತೆಂಬುದು ಸಿಂಧು ನದಿಯ ಕೊಳ್ಳದೊಳಗಿನ ಹರಪ್ಪಾ, ಮೋಹೆಂಜೊದಾರೋಗಳಲ್ಲಿ ಹೊರಬಿದ್ದ ಶೋಧಗಳಿಂದ ನಮಗೆ ಗೊತ್ತಾಗುತ್ತದೆ. ಉತ್ತರದಿಂದ ಬಂದ ಆರ್ಯರ ಸಂಸ್ಕೃತಿಗಿಂತ ಇದು ಎಷ್ಟೋ ಪಾಲು ಮೇಲಾಗಿತ್ತೆಂದು ಈಚೆಗಿನ ಸಂಶೋಧನೆಗಳಿಂದ ಸ್ಪಷ್ಟವಾಗಿದೆ. ಆರ್ಯರತಂಡಗಳು ಉತ್ತರದಿಂದ ಖೈಬರ, ಬೋಲನ್ ಕಣಿವೆಯ ಮಾರ್ಗಗಳಿಂದ ಒಂದರ ಹಿಂದೊಂದು ಭಾರತದಲ್ಲಿ ನುಗ್ಗಲಿಕ್ಕೆ ಹತ್ತಿದವು. ಅವರ ಒತ್ತಡವು ಹೆಚ್ಚಾದಂತೆ ಮೂಲ ನಿವಾಸಿಗಳಾದ ದ್ರಾವಿಡರು ದಕ್ಷಿಣಕ್ಕೆ ಸರಿಯಲಿಕ್ಕೆ ಹತ್ತಿದರು. ಆರ್ಯರು ಉತ್ತರ ಭಾರತವನ್ನೆಲ್ಲ ಆಕ್ರಮಿಸಿ ದಕ್ಷಿಣ ಭಾರತದಲ್ಲಿ ನೆಲೆಸಲು ಪ್ರಾರಂಭಿಸಿದರು. ಅವರ ಎಷ್ಟೋ ತಂಡಗಳು ನಮ್ಮ ನಾಡಿನ ವರೆಗೆ ಬಂದು ಇಲ್ಲಿಯೇ ಕಾಲೂರಿ ನಿಂತವು. ಬರಬರುತ್ತ ಆರ್ಯರಿಗೂ ದ್ರಾವಿಡರಿಗೂ ಶರೀರಸಂಬಂಧವಾಗಿ ಒಂದು ಮಿಶ್ರ ಜನಾಂಗವು ಉದಯವಾಯಿತು. ನಮ್ಮ ನಾಡಿನ ಜನರು ಈ ಮಿಶ್ರ ಜನಾಂಗದವರೇ ಆಗಿದ್ದಾರೆ. ನಮ್ಮ ಸಂಸ್ಕೃತಿಯಾದರೂ ಆರ್ಯರ ಮತ್ತು ದ್ರಾವಿಡರ ಸಂಸ್ಕೃತಿಗಳ ಮಿಶ್ರಣವಾಗಿದೆ.

ಆಗಿನ ಕಾಲಕ್ಕೆ ಇಡಿಯ ದಕ್ಷಿಣ ಭಾರತವು ಒಂದು ದೊಡ್ಡ ಅಡವಿಯಾಗಿತ್ತು. ಇದಕ್ಕೆ ದಂಡಕಾರಣ್ಯವೆಂದು ಕರೆಯುತ್ತಿದ್ದರು. ರಾಮನು ತನ್ನ ವನವಾಸವನ್ನು ಅನುಭೋಗಿಸಲು ಈ ದಂಡಕಾರಣ್ಯಕ್ಕೆ ಬಂದನು. ನಮ್ಮ ನಾಡು ಆಗ ದಂಡಕಾರಣ್ಯದ ಒಂದು ಭಾಗವಾಗಿತ್ತು. ರಾಮನು ಕಿಷ್ಕಿಂಧೆ (ಈಗಿನ ಹಂಪೆ) ಯಲ್ಲಿ ಕೆಲ ದಿನ ವಾಸಿಸಿ ಸುಗ್ರೀವ, ಹನುಮಂತ, ಜಾಂಬುವಂತರಂತಹ ಕನ್ನಡ ಕಡುಗಲಿಗಳ ಸ್ನೇಹವನ್ನು ಸಂಪಾದಿಸಿ ತನ್ನ

ಕೆಲಸವನ್ನು ಸಾಧಿಸಿಕೊಂಡನು. ಪಾಂಡವರು ತಮ್ಮ ಅಜ್ಞಾತವಾಸವನ್ನು ಯಾರಿಗೂ ತಿಳಿಯಗೊಡದಂತೆ ವಿರಾಟನಗರ (ಈಗಿನ ಹಾನಗಲ್ಲ) ದಲ್ಲಿ ಕಳೆದು ತಮ್ಮೂರಿಗೆ ಪ್ರಯಾಣ ಬೆಳೆಸಿದರು. ಅಂತಹ ಪ್ರಾಚೀನ ಕಾಲದಿಂದ ಈಗಿನ ಕಾಲದ ವರೆಗೆ ಈ ನಮ್ಮ ನಾಡಿನಲ್ಲಿ ಎಂತೆಂತಹ ವೀರರೂ, ವೀರರಮಣಿಯರೂ, ರಾಜರೂ, ರಾಣಿಯರೂ, ಮತೋದ್ಧಾರಕರೂ, ಪಂಡಿತರೂ, ಕವಿಗಳೂ, ಕವಯಿತ್ರಿಯರೂ, ವಚನಕಾರರೂ, ದಾಸರೂ, ಶಿಲ್ಪಿಗರೂ, ಮೊದಲಾದವರು ಉದಯವಾಗಿ ಬೆಳಗಿದರೆಂಬುದು ಈ ಕಥೆಗಳನ್ನು ಓದುತ್ತ ಹೋದಂತೆ ನಿಮಗೆ ಮನವರಿಕೆಯಾಗುವದು. ಈ ನಮ್ಮ ಕನ್ನಡ ಜನಾಂಗಕ್ಕೆ ಉಜ್ವಲ ಪರಂಪರೆಯಿದೆ. ಆ ಪರಂಪರೆಯು ತಲೆತಲಾಂತರಗಳಿಂದ ಇಲ್ಲಿಯ ವರೆಗೆ ಬೆಳೆಯುತ್ತ ಬೆಳೆಯುತ್ತ ಬಂದಿದೆ. ಇನ್ನು ಮೇಲೆ ಅದನ್ನು ಹೆಚ್ಚೆಚ್ಚಾಗಿ ಬೆಳೆಸುವ ಭಾರವು ನಿಮ್ಮ ತಲೆಯ ಮೇಲಿನದು ಎಂಬ ಮಾತನ್ನು ಮಾತ್ರ ನೀವು ನೆನಪಿನಲ್ಲಿಡಿರಿ!

ನಮ್ಮ ತಾಯ್ನಾಡು ಒಂದಾನೊಂದು ಕಾಲದಲ್ಲಿ ಕಾವೇರಿಯಿಂದ ಗೋದಾವರಿಯ ವರೆಗೆ ಹಬ್ಬಿತ್ತು. ಹದಿನೇಳನೆಯ ಶತಮಾನದಿಂದೀಚೆಗೆ ಮರಾಠಿಗರ ಪ್ರಾಬಲ್ಯವು ಹೆಚ್ಚಾಗಿ ಅದರ ಉತ್ತರದ ಬಹು ದೊಡ್ಡ ಭಾಗವು ಮಹಾರಾಷ್ಟ್ರಕ್ಕೆ ಸೇರಿದೆ; ಇನ್ನೂ ಕೆಲ ಭಾಗವು ಸೇರುವುದರಲ್ಲಿದೆ. ಈಗಿನ ನಮ್ಮ ನಾಡು ಉತ್ತರ ದಕ್ಷಿಣ ಸುಮಾರು ಐದು ನೂರು ಮೈಲು, ಪೂರ್ವ ಪಶ್ಚಿಮ ಸುಮಾರು ಮುನ್ನೂರು ಮೈಲು ವಿಸ್ತಾರವುಳ್ಳದ್ದು ಆದೆ. ಹಿಂದಿನಂತೆ ಅದು ಒಂದೇ ನಾಡಾಗಿಲ್ಲ; ಈಗ ಅದು ಹರಿದು ಹಂಚಿಹೋಗಿದೆ. ಬ್ರಿಟಿಶರ ಆಡಳಿತೆಯ ಕಾಲದಲ್ಲಿ ಮಾಡಿದ ವಿಭಾಗಗಳ ಇಲ್ಲವೆ ಪ್ರಾಂತಗಳ ಪರಿಣಾಮವಿದು. ಮುಂಬಯಿಕರ್ನಾಟಕ, ಮದ್ರಾಸ ಕರ್ನಾಟಕ, ಮತ್ತು ಮೈಸೂರ ಕರ್ನಾಟಕ, ಹೈದರಾಬಾದ ಕರ್ನಾಟಕ ಎಂದು ಬೇರೆ ಬೇರೆ ಭಾಗಗಳಾಗಿ ಬೇರೆ ಬೇರೆ ಆಡಳಿತಕ್ಕೆ ಒಳಪಟ್ಟಿದೆ. ಇದರಿಂದ ನಮ್ಮ ತಾಯ್ನಾಡಿನ ಪ್ರಗತಿಗೆ ಒಂದು ದೊಡ್ಡ ಆಘಾತವಾಗಿದೆ. ಆದುದರಿಂದ ಹರಿದು ಹಂಚಿ ಹೋದ ಭಾಗಗಳನ್ನೆಲ್ಲ ಒಟ್ಟುಗೂಡಿಸಿ ಒಂದೇ ಪ್ರಾಂತವನ್ನು ಮಾಡಲು ನಮ್ಮ ಜನರು ಆಂದೋಲನವನ್ನು ಹೂಡಿದ್ದಾರೆ. ಇದರಿಂದ ಬೇರೆ ಬೇರೆ ಭಾಗಗಳ

ಕನ್ನಡಿಗರಲ್ಲಿ ಪರಸ್ಪರ ಬಳಕೆಯು ಹೆಚ್ಚಾಗಿದೆ. ಕನ್ನಡ ನಾಡಿನ ಹೊಸ ಹುರುಪು ತಲೆದೋರುತ್ತಿದೆ. ಕನ್ನಡ ನಾಡು ಒಂದಾಗಬೇಕೆಂಬ ಹಂಬಲವು ಕನ್ನಡಿಗರೆಲ್ಲರಲ್ಲಿಯೂ ಹೆಚ್ಚುತ್ತಿದೆ. ಈಗಾಗಲೇ ನಮ್ಮ ರಾಷ್ಟ್ರದಲ್ಲಿ ಸ್ವಾತಂತ್ರ್ಯದ ಸೂರ್ಯನು ಉದಯಿಸಿ ನಾಲ್ಕು ವರ್ಷಗಳು ಸಂದಿವೆ. ಹೊಸ ಚುಣಾವಣೆಗಳು ನಡೆದು ಪ್ರಜಾಪ್ರಭುತ್ವ ಸರಕಾರವು ಈಗ ಅಧಿಕಾರ ದಲ್ಲಿ ಬಂದಿದೆ. ಪ್ರಜರ ಹಿತವನ್ನೇ ಅದು ತನ್ನ ಗುರಿಯಾಗಿ ಇಟ್ಟುಕೊಂಡಿದೆ. ಈ ಪ್ರಜಾನುರಾಗದ ಆಡಳಿತೆಯಲ್ಲಿ ಹಿಂದೊಮ್ಮೆ ಹರಿದು ಹಂಚಿ ಹೋದ ನಮ್ಮ ತಾಯ್ನಾಡು ಪುನಃ ಬೇಗನೆ ಒಂದೇ ನಾಡಾಗಲಿ ಎಂದು ನಾವೆಲ್ಲರೂ ಹಾರೈಸೋಣ.

# ೧. ಕನ್ನಡಿಗನಾದ ಹನುಮಂತನು

ಇವನು ನಮ್ಮ ಕರ್ನಾಟಕದಲ್ಲಿಯೇ ಹುಟ್ಟಿ ಬೆಳೆದವನು. ಸ್ವಾಮಿ ಭಕ್ತಿಯಲ್ಲಿ ಒಳ್ಳೇ ಹೆಸರಾದವನು. ಶೌರ್ಯ-ಧೈರ್ಯ-ಸಾಹಸಗಳಲ್ಲಿ ಇವನಿಗೆ ಸಮಾನರು ಆಗಿನ ಕಾಲಕ್ಕೆ ಯಾರೂ ಇರಲಿಲ್ಲ. ಇವನಿದ್ದುದು ರಾಮಾ-ಯಣ ಕಾಲವು. ಇವನ ತಾಯಿಯ ಹೆಸರು ಅಂಜನಾದೇವಿಯು. ಆದುದ ರಿಂದಲೇ ಇವನಿಗೆ "ಆಂಜನೇಯ" ಎಂಬ ಹೆಸರೂ ಉಂಟು. ಇವನ ಶರೀರವು ವಜ್ರದಷ್ಟು ಬಿರುಸಾಗಿಯೂ ಗಟ್ಟಿಮುಟ್ಟಾಗಿಯೂ ಇದ್ದಿತು. ಆದ್ದರಿಂದ ಇವನಿಗೆ 'ವಜ್ರದೇಹಿ' ಎಂದೂ ಕರೆಯುತ್ತಿದ್ದರು. 'ಪ್ರಾಣ ದೇವರು' 'ಮಾರುತಿ' ಎಂಬ ಬೇರೆ ಹೆಸರುಗಳೂ ಉಂಟು. ತೀರ ಚಿಕ್ಕವನಿರುವಾಗ ಹುಣ್ಣಿಮೆಯ ಚಂದ್ರನನ್ನು ನೋಡಿ ಅದೊಂದು ಹಣ್ಣೆಂದು ಭಾವಿಸಿ ಅದನ್ನು ಹಿಡಿದು ತರಲು ಆಕಾಶದಲ್ಲಿ ಹಾರಿದ್ದನಂತೆ.

ಇದೇ ಕಾಲಕ್ಕೆ ರಾಮ ಲಕ್ಷ್ಮಣರು ಹದಿನಾಲ್ಕು ವರುಷಗಳ ವನವಾಸ ಕ್ಕಾಗಿ ದಂಡಕಾರಣ್ಯದಲ್ಲಿ ಪಂಚವಟಿಯೆಂಬಲ್ಲಿ ಇರುತ್ತಿದ್ದರು. ಲಂಕೆಯ ಅರಸನಾದ ದುಷ್ಟ ರಾವಣನು ರಾಮ ಲಕ್ಷ್ಮಣರಿಲ್ಲದ ವೇಳೆಯಲ್ಲಿ ರಾಮನ ಹೆಂಡತಿಯಾದ ಸೀತಾದೇವಿಯನ್ನು ಮೋಸದಿಂದ ಎತ್ತಿಕೊಂಡು ತನ್ನ ಊರಿಗೆ ಹೋದನು. ರಾಮ ಲಕ್ಷ್ಮಣರು ದುಃಖಿತರಾಗಿ ದಂಡಕಾರಣ್ಯದಲ್ಲಿ ಅತ್ತಿತ್ತ ಸೀತೆಯನ್ನು ಹುಡುಕುತ್ತ ಹುಡುಕುತ್ತ ಕಿಷ್ಕಿಂಧೆಗೆ ಬಂದು ತಲುಪಿ ದರು. ಈಗಿನ ಹಂಪಿಯೇ ಆಗಿನ ಕಿಷ್ಕಿಂಧೆಯು. ಅಲ್ಲಿ ಆಗ ವಾಲಿಯೆಂಬ ವಾನರರ ದುಷ್ಟ ಅರಸನು ಆಳುತ್ತಿದ್ದನು. ರಾಮನು ಅವನನ್ನು ಕೊಂದು ಅವನ ತಮ್ಮನಾದ ಸುಗ್ರೀವನಿಗೆ ಪಟ್ಟಗಟ್ಟಿದನು. ಸುಗ್ರೀವನ ಸ್ನೇಹ ದಿಂದಲೇ ರಾಮನಿಗೆ ಹನುಮಂತನಂತಹ ಸ್ವಾಮಿ ಭಕ್ತನಾದ ಕಡುಗಲಿಯು ದೊರೆತನು.

ಹನುಮಂತನು ಸಮುದ್ರವನ್ನು ಜಿಗಿದು ಲಂಕೆಗೆ ಹೋಗಿ ಸೀತಾ ದೇವಿಯು ಸೆರೆಯಾಳಾಗಿ ಕೂತಿದ್ದ ಅಶೋಕವನವನ್ನು ಗೊತ್ತುಹಚ್ಚಿದನು.

ಗಂಡನ ಚಿಂತೆಯಲ್ಲಿಯೇ ಮಗ್ನಳಾಗಿ ಕುಳಿತಿದ್ದ ಸೀತಾದೇವಿಯ ಹತ್ತಿರ ಹೋಗಿ ಯಾರಿಗೂ ಕಾಣದ ಹಾಗೆ ಅವಳಿಗೆ ರಾಮನ ಮುದ್ರಿಕೆಯನ್ನು ಕೊಟ್ಟನು. ಅವಳು ತನ್ನ ಗುರುತಿಗಾಗಿ ತನ್ನ ತಲೆಯ ಆಭರಣವಾದ ಚೂಡಾಮಣಿಯನ್ನು ಹನುಮಂತನಿಗೆ ಕೊಟ್ಟು ಅದನ್ನು ರಾಮನಿಗೆ ತಪ್ಪದೆ




ಸೀತಾದೇವಿಯು ಹನುಮಂತನಿಗೆ ಚೂಡಾಮಣಿಯನ್ನು ಕೊಟ್ಟದ್ದು 1

ಮುಟ್ಟಿಸಲು ಹೇಳಿದಳು; ಅವಳ ಆಜ್ಞೆಯಂತೆ ಅವನು ಅದನ್ನು ತಂದು ರಾಮನಿಗೆ ಒಪ್ಪಿಸಿದನು. ರಾಮ-ಲಕ್ಷ್ಮಣರು ಹನುಮಂತನ ಮತ್ತು ಅವನ ವಾನರ-ಸೈನಿಕರ ಸಹಾಯದಿಂದ ರಾವಣನನ್ನು ಸೋಲಿಸಿ ಕೊಂದು ಸೀತೆಯನ್ನು ವೈಭವದಿಂದ ಕರೆದುಕೊಂಡು ಬಂದರು.

ಹನುಮಂತನ ನಿಃಸ್ವಾರ್ಥ ಬುದ್ಧಿ, ಸ್ವಾಮಿಭಕ್ತಿ, ಶೌರ್ಯ, ಧೈರ್ಯ, ಸಾಹಸ ಮೊದಲಾದ ಸದ್ಗುಣಗಳಿಗೆ ಮೆಚ್ಚಿ, ಜನರು ಅವನನ್ನು ದೇವರೆಂದು ಪೂಜಿಸುತ್ತಾರೆ. ಶನಿವಾರವು ಅವನ ವಾರವು. ಹನುಮಪ್ಪನ ಗುಡಿ ಇಲ್ಲದ ಹಳ್ಳಿಯು ಕರ್ನಾಟಕದಲ್ಲಿ ಸಿಗುವದು ಅಪರೂಪ.

### ಅಭ್ಯಸನಗಳು

೧. ಹನುಮಂತನ ಬೇರೆ ನಾಲ್ಕು ಹೆಸರುಗಳನ್ನು ಹೇಳಿರಿ.
೨. ಅವನಲ್ಲಿ ಎದ್ದು ಕಾಣುವ ಗುಣಗಳನ್ನು ಬರೆಯಿರಿ.
೩. ತೆರವಿದ್ದ ಸ್ಥಳದಲ್ಲಿ ಯೋಗ್ಯ ಶಬ್ದಗಳನ್ನು ತುಂಬಿ ಬರೆಯಿರಿ—
(ಅ) ಹನುಮಂತನು............ದೇವಿಯ ಮಗನು
(ಆ) ಆಗಿನ ಕಿಷ್ಕಿಂಧೆಯೇ ಈಗಿನ............
(ಇ) ಲಂಕೆಯಲ್ಲಿ ಸೀತೆಯು ಸೆರೆಯಾಳಾಗಿ............ವನದಲ್ಲಿದ್ದಳು
(ಈ) ಹನುಮಂತನು ಸೀತೆಗೆ ರಾಮನ............ಯನ್ನು ಕೊಟ್ಟನು.
(ಉ) ಸೀತೆಯು ತನ್ನ ಗುರುತಿಗಾಗಿ............ಯ ಆಭರಣವಾದ ............ಯನ್ನು ಕೊಟ್ಟು ಕಳುಹಿದಳು.
(ಊ) ............ವು ಹನುಮಂತನ ವಾರವು.

## ೨. ಕರ್ನಾಟಕದಲ್ಲಿ ಪಾಂಡವರ ಅಜ್ಞಾತವಾಸ

ಒಮ್ಮೆ ಪಾಂಡವರಿಗೂ ಕೌರವರಿಗೂ ಒಂದು ದೊಡ್ಡ ಜೂಜಾಟವಾಯಿತು. ಅದರಲ್ಲಿ ಪಾಂಡವರ ಹಿರಿ ಅಣ್ಣನಾದ ಧರ್ಮರಾಜನು ರಾಜ್ಯ, ಬೊಕ್ಕಸ ಎಲ್ಲವನ್ನೂ ಸೋತುಬಿಟ್ಟನು. ಅದರ ಪರಿಣಾಮದಿಂದ ಪಾಂಡವರು ಹನ್ನೆರಡು ವರುಷ ವನವಾಸವನ್ನೂ ಒಂದು ವರುಷ ಅಜ್ಞಾತವಾಸವನ್ನೂ ಅನುಭೋಗಿಸಬೇಕಾಯಿತು. ಹನ್ನೆರಡು ವರುಷ ವನವಾಸದ ಅವಧಿಯು ಮುಗಿಯುತ್ತ ಬಂದಂತೆ ಅಜ್ಞಾತವಾಸದ ವ್ಯವಸ್ಥೆಯನ್ನು ಏನು ಮಾಡಬೇಕು, ಹೇಗೆ ಮಾಡಬೇಕು, ಎಲ್ಲಿ ಇರಬೇಕು ಎಂಬ ಚಿಂತೆಯು ಅವರನ್ನು ಬಾಧಿಸಲಿಕ್ಕೆ ಹತ್ತಿತು. ಅಜ್ಞಾತವಾಸವೆಂದರೆ ಯಾರಿಗೂ ತಿಳಿಯದಹಾಗೆ ಇರುವದು. ಒಂದುವೇಳೆ ಅಜ್ಞಾತವಾಸದ ಅವಧಿಯಲ್ಲಿ ಪಾಂಡವರ ಇರುವಿಕೆಯು ಕೌರವರಿಗೆ ಗೊತ್ತಾದರೆ, ಪಾಂಡವರು ಪುನಃ ಹನ್ನೆರಡು ವರುಷ ವನವಾಸವನ್ನೂ ಒಂದು ವರುಷ ಅಜ್ಞಾತವಾಸವನ್ನೂ ಅನುಭೋಗಿಸಬೇಕೆಂಬ ಕರಾರು ಆಗಿತ್ತು. ಆದ್ದರಿಂದ ಪಾಂಡವರು ತಮ್ಮ ಅಜ್ಞಾತವಾಸದ ವಿಷಯಕ್ಕೆ ಬಹಳವಾಗಿ ಎಚ್ಚರಿಕೆಯನ್ನು ವಹಿಸುವ ಪ್ರಸಂಗವು ಬಂದಿತು.

ಕೊನೆಗೆ ಅವರೆಲ್ಲರೂ ವಿರಾಟನಗರ (ಈಗಿನ ಹಾನಗಲ್ಲ) ದಲ್ಲಿ ಅಜ್ಞಾತ ವಾಸವನ್ನು ಕಳೆಯಬೇಕೆಂದು ನಿಶ್ಚಯಿಸಿದರು. ಯಾರಿಗೂ ಗೊತ್ತಾಗದಂತೆ ಅವರೆಲ್ಲರೂ ಬೇರೆ ಬೇರೆ ಹೆಸರುಗಳನ್ನಿಟ್ಟುಕೊಂಡು ಬೇರೆ ಬೇರೆ ಉದ್ಯೋಗಗಳನ್ನು ಕೈಕೊಂಡು ವಿರಾಟರಾಜನಲ್ಲಿ ನೌಕರಿಗೆ ನಿಂತರು. ಧರ್ಮರಾಜನು ಪಂಚಾಂಗ ಹೇಳುವ ಜೋಯಿಸನಾಗಿ ಅವನ ಓಲಗದಲ್ಲಿದ್ದನು. ಭೀಮಸೇನನು ಅಡಿಗೆ ಮಾಡುವವನಾಗಿ 'ಬಲ್ಲವ' ಎಂಬ ಹೆಸರನ್ನಿಟ್ಟುಕೊಂಡನು. ಅರ್ಜುನನು 'ಬೃಹನ್ನಳೆ' ಎಂಬ ಹೆಸರನ್ನಿಟ್ಟುಕೊಂಡು ವಿರಾಟರಾಜನ ಮಗಳಾದ ಉತ್ತರೆಗೆ ಕುಣಿತವನ್ನು ಕಲಿಸುತ್ತಿದ್ದನು. ನಕುಲ-ಸಹದೇವರು ದನಕಾಯುವ ಹುಡುಗರಾದರು. ದ್ರೌಪದಿಯು 'ಸೈರಂಧ್ರಿ' ಎಂಬ ಹೆಸರನ್ನಿಟ್ಟುಕೊಂಡು ರಾಣಿಯ ದಾಸಿಯಾದಳು.



ಸ್ತ್ರೀವೇಷದಲ್ಲಿಯ ಭೀಮನು ಕೀಚಕನನ್ನು ಕೊಲ್ಲುತ್ತಾನೆ

ವಿರಾಟರಾಜನಿಗೆ ಒಬ್ಬ ದುಷ್ಟ ಸೇನಾಪತಿಯಿದ್ದನು; ಅವನ ಹೆಸರು ಕೀಚಕ. ಅವನು ಸೈರಂಧ್ರಿ (ದ್ರೌಪದಿ) ಯ ಮೇಲೆ ಮನಸ್ಸಿಟ್ಟು ಅವಳಿಗೆ ತನ್ನನ್ನು ಲಗ್ನವಾಗಲು ನಾಚಿಕೆ ಇಲ್ಲದೆ ಕೇಳಿದನು. ಈ ಸಂಗತಿಯನ್ನು ದ್ರೌಪದಿಯು ಭೀಮನಿಗೆ ಅರುಹಿದಳು. ಭೀಮನು ಇದನ್ನು ಕೇಳಿ ಕೆಂಡದಂತಾದನು. "ನೀನು ಅವನ ಮೇಲೆ ಪ್ರೇಮ ಇಟ್ಟವಳಂತೆ ನಟಿಸಿ ಅವನಿಗೆ

ಅಂದಿನ ರಾತ್ರಿ ಕೀಚಕನ ಮಲ್ಲಶಾಲೆಗೆ ಬರಲು ಕೇಳಿಕೋ; ನಾನು ಅವನ ಮುಂದಿನ ಸಮಾಚಾರವನ್ನು ತಕ್ಕೊಳ್ಳುತ್ತೇನೆ." ಎಂದು ಭೀಮನು ದ್ರೌಪದಿಗೆ ಹೇಳಿ ಕಳುಹಿದನು. ಅದರಂತೆ ದ್ರೌಪದಿಯು ಕೀಚಕನಿಗೆ ಹೇಳಿಬಿಟ್ಟಳು. ಇದನ್ನು ಕೇಳಿ ಆ ದುಷ್ಟನಿಗೆ ಹಿಡಿಸಲಾರದಷ್ಟು ಆನಂದವಾಯಿತು. ಅವನು ಅಂದಿನ ರಾತ್ರಿ ಒಳ್ಳೇ ಯಮಕಿನಿಂದ ತನ್ನ ಮಲ್ಲಶಾಲೆಗೆ ಬಂದು ದ್ರೌಪದಿಯನ್ನು ಒದರಿದನು. ಭೀಮನು ದ್ರೌಪದಿ ವೇಷದಲ್ಲಿ ಬಂದನು. ಒಳಗೆ ಬರುವದೊಂದೇ ತಡ, ಇಬ್ಬರಿಗೂ ಕೈಗೆ ಕೈ ಹತ್ತಿತು. ಸ್ವಲ್ಪೇ ಹೊತ್ತಿನಲ್ಲಿ ಭೀಮನು ಆ ದುರಾತ್ಮನನ್ನು ಕೊಂದುಬಿಟ್ಟನು.

ದೇವರ ದಯದಿಂದ ಮುಂದೆ ಸ್ವಲ್ಪ ದಿನಗಳ ತರುವಾಯ ಅಜ್ಞಾತವಾಸದ ಅವಧಿಯು ಕೌರವರಿಗೆ ಗೊತ್ತಾಗದಂತೆ ಮುಗಿಯಿತು. ಪಾಂಡವರು ಸುಖರೂಪವಾಗಿ ಇಂದ್ರಪ್ರಸ್ಥಕ್ಕೆ ಪಯಣ ಬೆಳೆಸಿದರು.

## ಅಭ್ಯಸನಗಳು

೧. ಪಾಂಡವರು ಮತ್ತು ದ್ರೌಪದಿಯು ವಿರಾಟರಾಜನಲ್ಲಿ ಯಾವ ಯಾವ ಕೆಲಸಕ್ಕೆ ನಿಂತರು ?

೨. ಪಾಂಡವರ ಅಜ್ಞಾತವಾಸವು ಕೌರವರಿಗೆ ಒಂದು ವೇಳೆ ಗೊತ್ತಾಗಿದ್ದರೆ, ಪಾಂಡವರು ಮತ್ತೆ ಏನು ಮಾಡಬೇಕೆಂಬ ಕರಾರು ಆಗಿತ್ತು ?

೩. ತೆರವಿದ್ದ ಸ್ಥಳಗಳಲ್ಲಿ ಯೋಗ್ಯ ಶಬ್ದ ಇಲ್ಲವೆ ಶಬ್ದಗಳನ್ನು ತುಂಬಿ ಬರೆಯಿರಿ:—

(ಅ) ಅಜ್ಞಾತವಾಸವೆಂದರೆ..................ಇರುವದು.

(ಆ) ಆಗಿನ ವಿರಾಟನಗರವೇ ಈಗಿನ..................

(ಇ) ಪಾಂಡವರ ಹಿರಿ ಅಣ್ಣನು................

(ಈ) ............ನು ವಿರಾಟರಾಜನ ಸೇನಾಪತಿಯು.

(ಉ) ............ಯು ವಿರಾಟರಾಜನ ಮಗಳು.

(ಊ) ಅಜ್ಞಾತವಾಸವು ಮುಗಿದಮೇಲೆ, ಪಾಂಡವರು............ಕ್ಕೆ ಪಯಣ ಬೆಳೆಸಿದರು.

# ೩. ಶ್ರೀ ಶಂಕರಾಚಾರ್ಯರು

ಕೇರಳ ಪ್ರಾಂತದಲ್ಲಿ ಪೂರ್ಣಾ ಎಂಬದೊಂದು ಹೊಳೆ. ಅದರ ತೀರ ದಲ್ಲಿ ಕಾಲಟಿ ಎಂಬದೊಂದು ಚಿಕ್ಕ ಹಳ್ಳಿ. ಅಲ್ಲಿ ಶಿವಗುರು ಎಂಬೊಬ್ಬ ಬ್ರಾಹ್ಮಣ. ಬಹಳ ದಿನಗಳವರೆಗೆ ಮಕ್ಕಳಾಗದ್ದರಿಂದ, ಅವನ ಹೆಂಡತಿ ಸತಿದೇವಿಯು ಶಿವಾರಾಧನೆಯನ್ನು ಮಾಡಹತ್ತಿದಳು. ಕೊನೆಗೆ ಆಕೆಗೆ ಕ್ರಿ. ಶ. ದ ೭೮೮ರಲ್ಲಿ ಒಂದು ಗಂಡುಕೂಸು ಹುಟ್ಟಿತು. ಇವರೇ ಶ್ರೀ ಶಂಕರಾಚಾರ್ಯರು. ಇವರು ತೀರ ಚಿಕ್ಕವರಿರುವಾಗಲೇ ಇವರ ತಂದೆಯು ತೀರಿಕೊಂಡನು. ತಾಯಿಯೇ ಇವರನ್ನು ಜೋಕೆ ಮಾಡಿದಳು. ಯೋಗ್ಯ ಸಮಯದಲ್ಲಿ ಇವರ ಮುಂಜಿವೆ ಮಾಡಿಸಿದಳು. ಆ ಗ್ರಾಮದಲ್ಲಿಯೇ ಶಕ್ಯ ವಿದ್ದಷ್ಟು ವಿದ್ಯಾಭ್ಯಾಸವನ್ನು ಮಾಡಿಸಿದಳು. ಇವರ ಬುದ್ಧಿಯು ಬಲು ಚುರುಕಾಗಿತ್ತು. ಆದುದರಿಂದ ವಿದ್ಯಾಭ್ಯಾಸವು ಬಲು ಬೇಗ ಮುಗಿಯಿತು. ತಾಯಿಗೆ ಹಿಡಿಸಲಾರದಷ್ಟು ಆನಂದವಾಯಿತು. ಮಗನಿಗೆ ಬೇಗನೆ ಲಗ್ನ ಮಾಡಬೇಕೆಂದು ಆಕೆಯ ಹೆಬ್ಬಯಕೆ; ಆದರೆ, ಬೇಗನೆ ಸನ್ಯಾಸಿಯಾಗ ಬೇಕೆಂದು ಮಗನ ಹವಣಿಕೆ. ಮಗನ ಈ ಲವಲವಿಕೆಯನ್ನು ಕಂಡು ಅವಳ ಮನಸ್ಸಿಗೆ ಬಲು ದುಃಖವಾಯಿತು. ಇದ್ದ ಒಬ್ಬ ಮಗನು ಸನ್ಯಾಸಿಯಾಗಿ ಬಿಟ್ಟರೆ ಮನೆತನದ ಗತಿಯೇನೆಂಬ ಚಿಂತೆಯು ಅವಳನ್ನು ಕೊರಗಲಿಕ್ಕೆ ಹಚ್ಚಿತು. ಮಗನ ಮನಸ್ಸನ್ನು ತಿರುಗಿಸಲು ಎಡೆಬಿಡದೆ ಹೆಣಗಾಡಿದಳು; ಆದರೆ, ಅದೆಲ್ಲ ವ್ಯರ್ಥವಾಯಿತು. ಕೊನೆಗೆ, ಶಂಕರಾಚಾರ್ಯರು ತಮ್ಮ ತಾಯಿಯ ಒಪ್ಪಿಗೆಯನ್ನು ಪಡೆದ ಬಗ್ಗೆ ಒಂದು ವಿಲಕ್ಷಣ ಕತೆಯಿದೆ.

ಒಂದು ದಿನ ಇಬ್ಬರೂ ಕೂಡಿ ಪೂರ್ಣಾನದಿಗೆ ಸ್ನಾನಕ್ಕೆಂದು ಹೋದರು. ಶಂಕರಾಚಾರ್ಯರು ಈಸುತ್ತೀಸುತ್ತ ಒಂದು ಮಡುವಿಗೇ ಹೋಗಿಬಿಟ್ಟರು. ಅಲ್ಲಿ ಒಂದು ಮೊಸಳೆಯು ಅವರ ಕಾಲನ್ನು ಹಿಡಿಯಿತು. ತಾಯಿಯ ಒಪ್ಪಿಗೆ ಯನ್ನು ಪಡೆಯುವ ಸಮಯವು ಇದೇ ಎಂದು ಬಗೆದು, ಅವರು ಚಿಟ್ಟನೆ ಚೀರಿ "ಅವ್ವಾ, ಮೊಸಳೆಯು ನನ್ನ ಕಾಲನ್ನು ಹಿಡಿದಿದೆ. ನನಗೆ ಸನ್ಯಾಸಿ ಯಾಗಲು ಒಪ್ಪಿಗೆ ಕೊಟ್ಟರೆ, ಅದು ಬಿಡುವದು" ಎಂದು ಅಂದರು. ಮಗನು ಹೇಗಾದರೂ ಬದುಕಿದರೆ ಸಾಕೆಂದು ನೆನೆದು ಉಪಾಯಗಾಣದೆ

"ಒಳ್ಳೇದು ಒಪ್ಪಿಗೆಯನ್ನು ಕೊಟ್ಟಿದ್ದೇನೆ" ಎಂದು ಅಂದಳು. ಕೂಡಲೆ ಮೊಸಳೆಯು ಅವರ ಕಾಲನ್ನು ಬಿಟ್ಟಿತಂತೆ! ಮಗನು ಮೊಸಳೆಯ ಹಿಡಿತದಿಂದ ಪಾರಾಗಿ ಬಂದುದನ್ನು ನೋಡಿ ಅವಳಿಗೆ ಬಲು ಸಂತೋಷವಾಯಿತು. ಹೀಗೆ ತಾಯಿಯ ಅಪ್ಪಣೆ ಪಡೆದು ನರ್ಮದಾ ನದಿಯ ದಂಡೆಯ ಮೇಲೆ ವಾಸಿಸುತ್ತಿದ್ದ ಗೋವಿಂದ ಭಗವತ್ಪಾದರೆಂಬ ಗುರುಗಳ ಬಳಿಗೆ ಹೋದರು. ಅವರು



ಶ್ರೀ ಜಗದ್ಗುರು ಶಂಕರಾಚಾರ್ಯರು

ಇವರ ಯೋಗ್ಯತೆಯನ್ನು ಕಂಡು ಇವರಿಗೆ ಸನ್ಯಾಸದೀಕ್ಷೆಯನ್ನು ಕೊಟ್ಟು ಮಂತ್ರೋಪದೇಶವನ್ನು ಮಾಡಿದರು. ಅಲ್ಲಿ ಕೆಲ ಕಾಲದ ವರೆಗೆ ಹೆಚ್ಚಿನ ವಿದ್ಯಾಭ್ಯಾಸವನ್ನು ಮಾಡಿಕೊಂಡು, ಉಪನಿಷತ್ತು-ಸೂತ್ರ-ಭಗವದ್ಗೀತೆಗಳಿಗೆ ಭಾಷ್ಯ (ಅರ್ಥ) ವನ್ನು ಬರೆದರು. ಇಷ್ಟಾದಮೇಲೆ ಗುರುಗಳ ಆಶೀರ್ವಾದವನ್ನು ಪಡೆದು ದಿಗ್ವಿಜಯಕ್ಕೆ ಹೊರಟರು. ಹೋದಲ್ಲೆಲ್ಲ ಬೌದ್ಧ-ಜೈನ ಮತಗಳ ಪಂಡಿತರನ್ನು ವಾದದಲ್ಲಿ ಸೋಲಿಸಿ ತಮ್ಮ ಶಿಷ್ಯರನ್ನಾಗಿ ಮಾಡಿಕೊಳ್ಳುತ್ತ ಕುಗ್ಗಿ ಹೋದ ಹಿಂದೂ ಧರ್ಮವನ್ನು ಮತ್ತೆ ಎತ್ತಿ ಹಿಡಿದರು.

ಭಾರತದ ಎಲ್ಲ ಕಡೆಯಲ್ಲಿ ತಿರುಗಾಡಿ ತಮ್ಮ ಧರ್ಮಸಿದ್ಧಾಂತಗಳನ್ನು ಜನರಿಗೆಲ್ಲ ಮನಗಾಣಿಸಿಕೊಟ್ಟರು.

ಶೃಂಗೇರಿಯಲ್ಲಿ ಇರುವ ತಮ್ಮ ಮುಖ್ಯ ಮಠವನ್ನು ಸ್ಥಾಪಿಸಿದರು. ಇದರಂತೆ ಬದರಿ, ದ್ವಾರಕಾ, ಜಗನ್ನಾಥಪುರಿಗಳಲ್ಲಿ ಮಠಗಳನ್ನು ಕಟ್ಟಿಸಿದರು. ಅಲ್ಲದೆ ಇತರ ಕಡೆಗಳಲ್ಲಿಯೂ ಚಿಕ್ಕ ಚಿಕ್ಕ ಮಠಗಳನ್ನು ಸ್ಥಾಪಿಸಿದರು. ಮತ್ತು ಅವುಗಳಲ್ಲಿ ಧರ್ಮಪ್ರಸಾರಕರನ್ನಿಟ್ಟು ಅವರಿಂದ ತಮ್ಮ ಮತವನ್ನು ಎಲ್ಲ ಕಡೆಗೆ ಹಬ್ಬಿಸಿದರು. ಈ ಪ್ರಕಾರ ಹಿಂದೂ ಧರ್ಮವನ್ನು ಊರ್ಜಿತ ಸ್ಥಿತಿಗೆ ಒಯ್ದು ಕೇದಾರನಾಥಕ್ಕೆ ಹೋಗಿ ಅಲ್ಲಿ ಸಮಾಧಿಯನ್ನು ಹೊಂದಿದರು.

ಇವರ ಮತಕ್ಕೆ ಅದ್ವೈತ (ಅಂದರೆ "ಎರಡು ಅಲ್ಲ" ಎಂದು ಅರ್ಥ) ಮತ ಎಂದು ಹೆಸರು. ಪರಮಾತ್ಮನೆ ಸತ್ಯ. ನಿಮಿತ್ತ ಭೇದದಿಂದ ಜೀವಾತ್ಮದ ಭೇದ ಕಾಣುವುದು. ಅದು ಮಾಯೆ (ಸುಳ್ಳು) ಎಂದು ಇವರ ವಾದ. ಇಂದಿಗೂ ಭಾರತದ ಎಲ್ಲ ಕಡೆಗಳಲ್ಲಿ ಈ ಪಂಥದ ಅನುಯಾಯಿಗಳೇ ಹೆಚ್ಚಾಗಿದ್ದಾರೆ.

## ಅಭ್ಯಸನಗಳು

೧. ಸನ್ಯಾಸಿಯಾಗಲು ತಾಯಿಯ ಒಪ್ಪಿಗೆಯನ್ನು ಹೇಗೆ ಪಡೆದರು ?

೨. ತೆರವಿದ್ದ ಸ್ಥಳಗಳಲ್ಲಿ ಯೋಗ್ಯ ಶಬ್ದಗಳನ್ನು ತುಂಬಿ ಬರೆಯಿರಿ.—

(ಅ) ಇವರು................ಪ್ರಾಂತದಲ್ಲಿ...........ಎಂಬ ಗ್ರಾಮದಲ್ಲಿ ಹುಟ್ಟಿದರು.

(ಆ) ಇವರ ತಂದೆಯ ಹೆಸರು...........

(ಇ) ಇವರು........ ......ಎಂಬ ಗುರುಗಳಲ್ಲಿ...........ದೀಕ್ಷೆಯನ್ನು ಹೊಂದಿದರು.

(ಈ) ಇವರ ಮುಖ್ಯ ಮಠವು... ........ಎಂಬ ಊರಲ್ಲಿದೆ.

(ಉ) ಅದ್ವೈತವೆಂದರೆ................ನಿಗೂ...................ನಿಗೂ ಭೇದವಿಲ್ಲ.

# ೪. ಮಯೂರವರ್ಮ

ಇತಿಹಾಸ ಓದಿದಂತೆ, ನಿಮಗೆ ಹಲವು ವೀರಾವೇಶದ ಕಥೆಗಳು ಕಂಡು ಬರುವವು. ಈಗ ನಿಮಗೆ ಒಂದು ಕಥೆಯನ್ನು ಹೇಳುವೆನು. ಕದಂಬ ಅರಸನಾದ ಮಯೂರವರ್ಮ. ಈತನ ಮೊದಲಿನ ಹೆಸರು ಮಯೂರಶರ್ಮ. ಇವನ ತಂದೆ ರಾಜಶರ್ಮ, ತಾಯಿಯ ಹೆಸರು ಪುಷ್ಪಾವತಿ. ರಾಜಶರ್ಮನಿಗೆ ಇಬ್ಬರು ಹೆಂಡಂದಿರು. ಚಿಕ್ಕ ಹೆಂಡತಿಯ ಮಾತು ಕೇಳಿ ಹಿರಿ ಹೆಂಡತಿಯಾದ ಪುಷ್ಪಾವತಿಯನ್ನು ಹೊರಗೆ ಹಾಕಿದನು. ಆಗ ಆಕೆ ತುಂಬಾ ಗರ್ಭಿಣಿಯಾಗಿದ್ದಳು. ಈಕೆಯ ಮಗನೇ ಮಯೂರನು. ಇವರ ಮನೆಯ ಮುಂದೆ ಕದಂಬ (ತಾಳೆ) ಮರವಿದ್ದಿತಂತೆ. ಆದರಿಂದ ಇವರ ಮನೆತನಕ್ಕೆ ಕದಂಬ ಎಂಬ ಅಡ್ಡ ಹೆಸರು ಬಂದಿತು.

ಮಯೂರನು ಚಿಕ್ಕವನಿದ್ದಾಗ ಸಿಂಹದ ಮರಿಯಂತೆ ಇದ್ದನು. ಅವನ ಬುದ್ಧಿ ಬಲ: ಚುರುಕು; ಎದೆಯು ಉಕ್ಕಿನಂತಹದು. ಸಂಸ್ಕೃತ ಅಭ್ಯಾಸ ಮಾಡಲಿಕ್ಕೆಂದು ಪಲ್ಲವ ರಾಜರ ರಾಜಧಾನಿಯಾದ ಕಂಚೀ ಪಟ್ಟಣಕ್ಕೆ ಹೋದನು. ಒಂದು ದಿನ ಅಭ್ಯಾಸ ತೀರಿಸಿಕೊಂಡು ತನ್ನ ಓರಗೆಯ ಬಾಲಕರ ಕೂಡ ಬೀದಿಯಲ್ಲಿ ಹೋಗುತ್ತಿರುವಾಗ ಅರಸನ ಸವಾರನೊಬ್ಬನು ಇವನ ಮೇಲೆ ಕುದುರೆಯನ್ನು ಹಾಯಿಸಿದನು. ಸವಾರನ ಈ ಸೊಕ್ಕಿನ ನಡತೆಯನ್ನು ಕಂಡು, ಅವನು ಕೆಂಡದಂತಾಗಿ ಧೈರ್ಯದಿಂದ ಅರಸನ ಎದುರಿಗೆ ಹೋಗಿ ತನ್ನ ದೂರನ್ನು ಅರಿಕೆಮಾಡಿಕೊಂಡನು. ಅರಸನು ಹುಡುಗನ ಮಾತನ್ನು ಕಿವಿಗೊಟ್ಟು ಕೇಳದೆ, ಅವನನ್ನೇ ಬೆದರಿಸಿ ಓಲಗದಿಂದ ಹೊರಗೆ ಹಾಕಿಸಿದನು. ಮಯೂರನು ಒಳ್ಳೇ ಹೇವದ ವೀರ; ಆಡಿದಂತೆ ಮಾಡಿಯೇ ತೋರಿಸುವವ. 'ಈ ಅರಸನ ಸೊಕ್ಕು ಮುರಿಯದಿದ್ದರೆ ನನ್ನ ಹೆಸರು ಮಯೂರನಲ್ಲ' ಎಂದು ಎದೆಗೆ ಕೈಹಚ್ಚಿಕೊಂಡು ಹೇಳಿ ಕಿಡಿಕಿಡಿಯಾಗಿ ಹೊರಟನು.

ಅಭ್ಯಾಸದ ಕಡೆಗೆ ಅವನ ಮನಸು ಹೋಗದಂತಾಯಿತು. ಹೇಗಾದರೂ ಮಾಡಿ ತನಗೆ ಆದ ಅಪಮಾನದ ಸೇಡು ತೀರಿಸಿಕೊಳ್ಳಬೇಕೆಂಬ ಋಂಗು



ಬಾಲಕನಾದ ಮಯೂರನು ಅರಸನ ಎದುರಿಗೆ ನಿಂತು ಮಾತನಾಡುತ್ತಿದ್ದಾನೆ.

ಅವನಲ್ಲಿ ಮನೆಮಾಡಿಕೊಂಡಿತು. ಅವನ ಸಾಹಸ, ಅಭಿಮಾನ, ಗಟ್ಟಿಗತನ ಮತ್ತು ಜಾಣತನಗಳನ್ನು ನೋಡಿ ಕೆಲವರು ಅವನನ್ನು ಹಿಂಬಾಲಿಸಿದರು. ಈ ಬೆಂಬಲಿಗರ ಸಹಾಯದಿಂದ ಕಂಚಿಯಲ್ಲಿಯೇ ಅರಸನ ವಿರುದ್ಧ ಬಂಡು ಎಬ್ಬಿಸಿದನು. ಮಯೂರನೇ ಇದಕ್ಕೆಲ್ಲ ಮೂಲನೆಂದು ಗೊತ್ತಾಗಿ ಅರಸನು ಅವನನ್ನು ಸೆರೆಹಿಡಿಯಲು ಆಜ್ಞಾಪಿಸಿದನು. ಮಯೂರನು ಯಾರ ಕೈಗೂ ಸಿಗದೆ ನೆರೆಯಲ್ಲಿಯ ಅಡವಿಯಲ್ಲಿ ಅಡಗಿಕೊಂಡನು. ಅಲ್ಲಿಯ ಕಾಡು ಜನರ ಕೂಡ ಗೆಳೆತನ ಮಾಡಿ ಅವರನ್ನೆಲ್ಲ ಕೂಡಿ ಹಾಕಿ ಅವರಿಗೆ ತಾನೇ ಮುಖಂಡನಾದನು. ಅವರ ಬೆಂಬಲದಿಂದ ನೆರೆಹೊರೆಯ ಚಿಕ್ಕ ಚಿಕ್ಕ ಅರಸರ ರಾಜ್ಯದಲ್ಲಿ ಹಾವಳಿ ನಡಿಸಿ ಅವರಿಂದ ಕಪ್ಪಕಾಣಿಕೆ ಎತ್ತಲು ಆರಂಭಿಸಿದನು.

ಈ ಸುದ್ದಿಯು ಪಲ್ಲವರಾಜನ ಕಿವಿಗೆ ಹೋಗಿ ಮುಟ್ಟಿತು. ವೈರಿಯು ಚಿಕ್ಕವನೆಂದು ಅಲಕ್ಷಿಸಲಿಕ್ಕಾಗದೆಂದು ನೆನೆದು, ಪಲ್ಲವರಾಜನು ಮಯೂರನನ್ನು ಬಗ್ಗುಬಡಿಯಲಿಕ್ಕೆ ಅವನ ಮೇಲೆ ಏರಿ ಹೋದನು. ಪಲ್ಲವರಾಜನು

ಸೋತು, ಅವನ ಸಂಗಡ ಒಪ್ಪಂದ ಮಾಡಿಕೊಂಡು, ಅವನನ್ನು ಬನವಾಸಿಯ ನಾಡಿಗೆ ಅರಸನನ್ನಾಗಿ ಮಾಡಿ, ತಾನೇ ಬನವಾಸಿಗೆ ಹೋಗಿ ಮಯೂರನಿಗೆ ಪಟ್ಟಗಟ್ಟಿದನು ಅಂದಿನಿಂದ ಮಯೂರನು ಮಯೂರವರ್ಮನಾದನು. ಬನವಾಸಿಗೆ ವೈಜಯಂತೀ (ಗೆಲುವಿನ ಪಟ್ಟಣ) ಎಂದು ಹೆಸರನ್ನಿಟ್ಟು ತಾನೇ ಆಳಲಾರಂಭಿಸಿದನು. ಇವನೇ ಕದಂಬರ ಮೂಲ ಪುರುಷ. ಇವರ ಕುಲ ದೇವರು ಬನವಾಸಿಯ ಮಧುಕೇಶ್ವರನು. ಹಲಸಿಗೆ ಮತ್ತು ಕಿತ್ತೂರಿನ ಹತ್ತಿರ ದೇಗಾವಿಗಳಲ್ಲಿ ಈ ವಂಶದ ರಾಜರು ಕಟ್ಟಿಸಿದ ಸುಂದರ ಗುಡಿಗಳಿವೆ. ಇವರ ವಂಶದವರು ಹಾನಗಲ್ಲು, ಹಲಸಿಗೆ, ಗೋವೆಗಳನ್ನು ರಾಜಧಾನಿಗಳನ್ನಾಗಿ ಮಾಡಿಕೊಂಡು ರಾಜ್ಯವಾಳುತ್ತಿದ್ದರು.

## ಅಭ್ಯಸನಗಳು

೧. ಕೆಳಗೆ ಕೆಲವು ಅಪೂರ್ಣ ವಾಕ್ಯಗಳನ್ನು ಕೊಟ್ಟಿದೆ. ಪ್ರತಿಯೊಂದು ವಾಕ್ಯದ ಕೊನೆಗೆ ಕಂಸಿನಲ್ಲಿ ಶಬ್ದಗಳನ್ನು ಕೊಟ್ಟಿದೆ. ಅವುಗಳಲ್ಲಿ ಯೋಗ್ಯ ವಾದದ್ದನ್ನು ಆರಿಸಿಕೊಂಡು ತುಂಬಿ ವಾಕ್ಯಗಳನ್ನು ಪೂರ್ಣ ಮಾಡಿರಿ:—

(ಅ) ಕದಂಬರ ಕುಲದೇವರು.. ........ (ವಿಶ್ವೇಶ್ವರನು, ಮಹಾ ಬಲೇಶ್ವರನು, ಮಧುಕೇಶ್ವರನು).

(ಆ) ರಾಜಶರ್ಮನು ತನ್ನ........ಮಾತು ಕೇಳಿ ಪುಷ್ಪಾವತಿಯನ್ನು ಮನೆಬಿಟ್ಟು ಹೊರಗೆ ಹಾಕಿದನು. (ಹಿರಿ ಅಕ್ಕನ, ಚಿಕ್ಕ ಹೆಂಡತಿಯ, ಚಿಕ್ಕ ತಂಗಿಯ).

(ಇ) ಮಯೂರನ ಮನೆಯ ಮುಂದೆ.............ಇದ್ದಿತಾದ್ದರಿಂದ ಇವನ ಮನೆತನಕ್ಕೆ ಕದಂಬ ಎಂಬ ಅಡ್ಡಹೆಸರು ಬಂದಿತು. (ಬಾಳೆಮರ, ತೆಂಗಿನ ಮರ, ಈಚಲ ಮರ, ತಾಳೆಯ ಮರ).

(ಈ) ಮಯೂರನು ಒಂದು ದಿನ ಬೀದಿಯಲ್ಲಿ ಹೋಗುತ್ತಿರುವಾಗ ಅರಸನ........ಅವನ ಮೇಲೆ ಕುದುರೆಯನ್ನು ಹಾಯಿಸಿದನು. (ಸವಾರನು, ಮಂತ್ರಿಯು, ದಳಪತಿಯು).

೨. ಮಯೂರನು ಪಲ್ಲವರಾಜನಿಂದಾದ ಅಪಮಾನದ ಸೇಡು ತೀರಿಸಿ ಕೊಳ್ಳಲು ಯಾವ ಹಂಚಿಕೆಗಳನ್ನು ಮಾಡಿದನು ?

# ೫. ಗಂಡುಗಲಿ ಚಾಲುಕ್ಯರ ಪುಲಿಕೇಶಿ

ಚಾಲುಕ್ಯರು ಅಯೋಧ್ಯೆಯಿಂದ ಕರ್ನಾಟಕಕ್ಕೆ ಬಂದು ನೆಲೆಸಿದ ಚಂದ್ರ ವಂಶದ ಕ್ಷತ್ರಿಯರು. ಮೂಲ ಪುರುಷನು ಜಯಸಿಂಹನು ಇವನ ಮರಿ- ಮಗನೇ ವೀರ ಪುಲಿಕೇಶಿಯು. ಇವನ ತಂದೆಯ ಹೆಸರು ಕೀರ್ತಿವರ್ಮ. ಕೀರ್ತಿವರ್ಮನು ತನ್ನ ಮಕ್ಕಳು ಇನ್ನೂ ಚಿಕ್ಕವರಿರುವಾಗಲೇ ತೀರಿಕೊಂಡು ಬಿಟ್ಟನು. ಆದುದರಿಂದ ಅವನ ತಮ್ಮ ಮಂಗಲೇಶನು ಪಟ್ಟವೇರಿದನು. ಅವನು ಅಷ್ಟೊಂದು ವೀರನಾಗಿರಲಿಲ್ಲ. ಬಾದಾಮಿಯ ಗುಡ್ಡದೊಳಗೆ ದೊಡ್ಡ ದೊಡ್ಡ ದೇವಾಲಯಗಳನ್ನು ಕೊರೆಯಿಸಿದನು. ಅವು ಇನ್ನೂ ಅಚ್ಚಳಿಯದೆ ಉಳಿದಿವೆ. ದೂರ ದೂರದ ಪ್ರವಾಸಿಕರು ಬಂದು ಇವುಗಳನ್ನು ನೋಡಿ ಅಚ್ಚರಿಗೊಂಡು ಹೋಗುತ್ತಾರೆ. ಪುಲಿಕೇಶಿಯು ವಯಸ್ಸಿಗೆ ಬಂದ ಮೇಲೆ ಅವನ ಕಕ್ಕನಾದ ಮಂಗಲೇಶನು ಅವನಿಗೆ ಪಟ್ಟವನ್ನು ಬಿಟ್ಟುಕೊಡಬೇಕಾ ಗಿತ್ತು. ಆದರೆ ಅವನು ಹಾಗೆ ಮಾಡಲಿಲ್ಲ; ಇಷ್ಟೇ ಅಲ್ಲ, ಸಿಂಹಾಸನವು ತನ್ನ ಮಕ್ಕಳಿಗೆ ಆಗಬೇಕೆಂಬ ಗುಪ್ತ ಕಾರಸ್ಥಾನವನ್ನು ನಡೆಯಿಸಿದ್ದನು. ಈ ಕುತಂತ್ರವು ಪುಲಿಕೇಶಿಗೆ ಹೇಗೋ ಗೊತ್ತಾಯಿತು. ಕೂಡಲೆ ಅವನು ದಂಡು ತಕ್ಕೊಂಡು ಬಂದು ಕಕ್ಕನ ಕೂಡ ಯುದ್ಧ ಮಾಡಿದನು. ಆದರಲ್ಲಿ ಮಂಗಲೇಶನು ಸೋತು ಮಡಿದನು. ಪುಲಿಕೇಶಿಯು ಪಟ್ಟವೇರಿದನು.

ಈತನಿಗೆ ಎರಡನೆಯ ಪುಲಿಕೇಶಿಯೆಂದೂ ಕರೆಯುವರು; ಯಾಕಂದರೆ ಇವನಿಗಿಂತ ಮೊದಲು ಒಬ್ಬ ಪುಲಿಕೇಶಿಯು ಆಳಿದ್ದನು. ಈತನು ಚಾಲು- ಕ್ಯರ ವಂಶಕ್ಕೆ ಸೂರ್ಯನಂತಿದ್ದನು ಪ್ರಜೆಗಳಿಗೆ ತಂದೆ; ಆದರೆ, ವೈರಿಗಳಿಗೆ ಹುಲಿ. ಈತನು ಮಹಾ ಪ್ರತಾಪಶಾಲಿಯಾದುದರಿಂದ ನೋಡು ನೋಡು ವರ್ಷದಲ್ಲಿ ಕರ್ನಾಟಕದೊಳಗಿನ ಎಲ್ಲ ರಾಜರನ್ನು ಗೆದ್ದು ತನ್ನ ಮಾಂಡಲಿಕ ರನ್ನಾಗಿ ಮಾಡಿಕೊಂಡನು. ಉತ್ತರದಲ್ಲಿಯ ಗುರ್ಜರ, ಲಾಟ, ಮಾಳವ, ಕೋಸಲರನ್ನು ಬಣ್ಣಿಗೆತಂದು ತನ್ನ ಕೈಕೆಳಗಿನ ರಾಜರನ್ನಾಗಿ ಮಾಡಿಕೊಂಡನು. ಇದರಿಂದ ಇವನ ರಾಜ್ಯವು ಉತ್ತರದಲ್ಲಿ ವಿಂಧ್ಯಾದ್ರಿಯ ವರೆಗೆ ಬೆಳೆಯಿತು. ದಕ್ಷಿಣದಲ್ಲಿ ಪಲ್ಲವ, ಪಾಂಡ್ಯ, ಚೇರ, ಚೋಳ, ಕೇರಳ ಮೊದಲಾದ ಅರಸರು ಇವನ ಸಾಮಂತರಾದರು. ಈ ಪ್ರಕಾರ ಇವನು ಇಡಿಯ ದಕ್ಷಿಣಭಾರತದ

ಚಕ್ರವರ್ತಿಯಾದನು. ಈ ಸಮಯದಲ್ಲಿ ಉತ್ತರ ಭಾರತದಲ್ಲಿ ಕನೋಜದಲ್ಲಿ ಹರ್ಷವರ್ಧನನೆಂಬೊಬ್ಬ ಬಲಾಢ್ಯ ಅರಸನು ಆಳುತ್ತಿದ್ದನು. ದಕ್ಷಿಣ ಭಾರತವನ್ನು ಗೆಲ್ಲಬೇಕೆಂದು ಅವನ ಹವಣಿಕೆ ಇತ್ತು. ಅವನು ಒಂದು ದೊಡ್ಡ ದಂಡಿನೊಡನೆ ಪುಲಿಕೇಶಿಯ ಮೇಲೆ ಸಾಗಿ ಬಂದನು. ಅವನ




ಎರಡನೆಯ ಪುಲಿಕೇಶಿಯ ರಾಜ್ಯವಿಸ್ತಾರ

ಸೈನ್ಯದಲ್ಲಿ ಆರವತ್ತು ಸಾವಿರ ಆನೆಗಳಿದ್ದವಂತೆ. ಇಂಥ ದೊಡ್ಡ ದಂಡನ್ನು ಪುಲಿಕೇಶಿಯು ನರ್ಮದಾ ನದಿಯ ದಂಡೆಯ ಮೇಲೆ ಎದುರಿಸಿದನು. ಅಲ್ಲಿ ಇಬ್ಬರಿಗೂ ಘನಘೋರ ಯುದ್ಧವಾಯಿತು. ಅದರಲ್ಲಿ ಹರ್ಷವರ್ಧನನು



ಇರಾಣದ ರಾಯಭಾರಿಯು ಪುಲಿಕೇಶಿಯ ದರಬಾರಕ್ಕೆ ಬಂದದ್ದು

ಸೋತು ಓಡಿಹೋದನು. ಆ ಕಾಲಕ್ಕೆ ಇಡಿಯ ಭಾರತದಲ್ಲಿ ಪುಲಿಕೇಶಿಗೆ ಯಾರೂ ಈಡಿರಲಿಲ್ಲ. ಈ ಯುದ್ಧದಲ್ಲಿ ಜಯದೊರೆತುದರಿಂದ 'ಪರಮೇಶ್ವರ' ಎಂಬ ಬಿರುದನ್ನು ಧರಿಸಿದನು. ಅಜಂತೆಯ ಗುಡ್ಡದ ಗವಿಗಳಲ್ಲಿ ತರತರದ ಚಿತ್ರಗಳನ್ನು ಕೊರೆಯಿಸಿದನು. ಅವು ಇನ್ನೂ ಅಚ್ಚಳಿಯದೆ ಉಳಿದಿರುವವು. ದೂರದೂರದ ಪ್ರವಾಸಿಕರು ಬಂದು ನೋಡಿ ಬೆರಳು ಕಚ್ಚುತ್ತಾರೆ.

ಪುಲಿಕೇಶಿಯ ಕೀರ್ತಿಯನ್ನು ಕೇಳಿ ಇರಾಣದ ಅರಸನಾದ ಖುಸರು ಎಂಬವನು ಈತನ ಸ್ನೇಹ ಸಂಪಾದಿಸಲು ತನ್ನ ರಾಯಭಾರಿಯನ್ನು ಕಳಿಸಿದ್ದನು. ಈತನ ಕಾಲದಲ್ಲಿ ಕರ್ನಾಟಕದ ಕೀರ್ತಿಯು ಭಾರತದಲ್ಲಷ್ಟೇ ಅಲ್ಲದೆ ಬೇರೆ ದೇಶಗಳಲ್ಲಿಯೂ ಬೆಳಗಿತು. ಈತನ ಕಾಲವೆಂದರೆ ಕರ್ನಾಟಕದ ಚಿನ್ನಗಾಲ. ಆದುದರಿಂದಲೇ ಆಗಿನ ಕರ್ನಾಟಕದ ಸ್ಥಿತಿಯನ್ನು ಕಣ್ಣಾರೆ ಕಾಣಲು ಹುವೆನ್‌ತ್ಸಾಂಗನೆಂಬೊಬ್ಬ ಚೀನದ ಪ್ರವಾಸಿಯು ಕ್ರಿ. ಶ. ೬೪೧ ರಲ್ಲಿ ಈತನ ರಾಜಧಾನಿಯಾದ ಬಾದಾಮಿಗೆ ಬಂದಿದ್ದನು. ಅವನು ಬರೆದಿಟ್ಟದ್ದೇನೆಂದರೆ– " ಈ ರಾಜಧಾನಿಯ ಸುತ್ತಳತೆ ಆರು ಮೈಲು. ಭೂಮಿಯು ಬೆಳೆಯುಳ್ಳದ್ದು; ಹವೆ ಸೆಕೆಯುಳ್ಳದ್ದು. ಜನರು ಪ್ರಾಮಾಣಿಕರು; ಸ್ವಾಭಿಮಾನಿಗಳು; ಮುಯ್ಯಕ್ಕೆ ಮುಯ್ಯ ತೀರಿಸುವವರು. ಅಪಮಾನವಾದರೆ, ಪ್ರಾಣದ ಹಂಗು ಬಿಡುವವರು. ಮಾನವೇ ಇವರ ಧನ. ಸಂಕಟ ಕಾಲದಲ್ಲಿ ಜನರಿಗೆ ನೆರವಾಗುವವರು. ಮೊರೆಬಿದ್ದ ಶತ್ರುಗಳನ್ನು ಕೊಲ್ಲರು. ಜನರು ನಿಲುವಿಕೆಯಲ್ಲಿ ಎತ್ತರ. ಅರಸನ ಹತ್ತರ ಸಾವಿರಾರು ಆನೆಗಳೂ ಲಕ್ಷಾವಧಿ ವೀರರೂ ಇರುವರು. ಅರಸನು ಕ್ಷತ್ರಿಯನು. "

ಹೀಗೆ ವೈಭವದಿಂದ ಆಳುತ್ತಿರಲು, ಕಂಚಿಯ ನರಸಿಂಹವರ್ಮನೆಂಬ ಪಲ್ಲವ ರಾಜನು ದೊಡ್ಡ ದಂಡಿನೊಡನೆ ಬಾದಾಮಿಯನ್ನು ಮುತ್ತಿದನು. ಈ ಯುದ್ಧದಲ್ಲಿ ಪುಲಿಕೇಶಿಯು ಕ್ರಿ. ಶ. ೬೪೦ ರಲ್ಲಿ ಮಡಿದನು.

## ಅಭ್ಯಾಸನಗಳು

೧. ಹುವೆನ್‌ತ್ಸಾಂಗನು ಬರೆದಿಟ್ಟಿರುವ ವೃತ್ತಾಂತವನ್ನು ಬರೆಯಿರಿ.

೨. ಕೆಳಗೆ ಅಪೂರ್ಣ ವಾಕ್ಯಗಳನ್ನು ಕೊಟ್ಟಿದೆ. ಪ್ರತಿಯೊಂದು ವಾಕ್ಯದ ಕೊನೆಗೆ ಕೆಲವು ಶಬ್ದಗಳನ್ನು ಕೊಟ್ಟಿದೆ ಅವುಗಳಲ್ಲಿ ಯೋಗ್ಯವಾದದ್ದೊಂದನ್ನು ಆರಿಸಿಕೊಂಡು ತುಂಬಿ ವಾಕ್ಯವನ್ನು ಪೂರ್ಣ ಮಾಡಿ ಬರೆಯಿರಿ:—

(ಅ) ಚಾಲುಕ್ಯರ ಮೂಲ ಪುರುಷ... ........ನು. (ಮಂಗಲೇಶ, ಕೀರ್ತಿವರ್ಮ, ಜಯಸಿಂಹ)

(ಆ) ........ಬಾದಾಮಿಯ ಗುಡ್ಡದಲ್ಲಿ ದೊಡ್ಡ ದೊಡ್ಡ ದೇವಾಲಯಗಳನ್ನು ಕೊರೆಯಿಸಿದನು. (ಜಯಸಿಂಹನು, ಮಂಗಲೇಶನು, ಪುಲಿಕೇಶಿಯು.)

(ಇ) ಎರಡನೆಯ ಪುಲಿಕೇಶಿಯ ಕಾಲದಲ್ಲಿ ಬಾದಾಮಿಯ ಸುತ್ತಳತೆಯು........ಮೈಲು ಇತ್ತು. (ಆರು, ಎಂಟು, ನಾಲ್ಕು)

(ಈ) ಇವನ ಸ್ನೇಹ ಸಂಪಾದಿಸಲು...........ದೇಶದ ಅರಸನಾದ ಖುಸರು ತನ್ನ ರಾಯಭಾರಿಯನ್ನು ಕಳಿಸಿದ್ದನು. (ಬಲುಚಿಸ್ತಾನ, ಅಫಗಾನಿಸ್ತಾನ, ಇರಾಣ)

(ಉ) ಇವನ ವೈಭವವನ್ನು ಕೇಳಿ........ದೇಶದ ಪ್ರವಾಸಿಯಾದ ಹುವೆನ್‌ತ್ಸಾಂಗನು ಕಣ್ಣಾರೆ ನೋಡಲು ಬಾದಾಮಿಗೆ ಬಂದಿದ್ದನು. (ಜಪಾನ, ಚೀನ, ತಿಬೇಟ.)

(ಊ) ಇವನು ಕ್ರಿ. ಶ. ...........ರಲ್ಲಿ ಮಡಿದನು. (೬೪೯, ೭೪೦, ೬೪೦.)

# ೬. ನೃಪತುಂಗ

ನೃಪತುಂಗನು ರಾಷ್ಟ್ರಕೂಟ ವಂಶದವನು. ಇವನ ತಂದೆಗೆ ಜಗತುಂಗ ಎಂಬ ಬಿರುದು ಇದ್ದಿತು. ಇವನೂ ತಂದೆಯಂತೆಯೆ ಶೂರನಿದ್ದನು. ಇವನಿಗೆ ನೃಪತುಂಗ, ಅಮೋಘವರ್ಷ ಎಂಬ ಬಿರುದುಗಳಿದ್ದವು. ಎಲ್ಲ ರಾಜರು ಇವನಿಗೆ ಹೆದರಿ ಬೆಕ್ಕಿನಂತೆ ಸುಮ್ಮನೆ ಕುಳಿತಿದ್ದರು. ಇವನ ಕಾಲಕ್ಕೆ ಚಾಲುಕ್ಯರು ಕಳೆದುಕೊಂಡ ತಮ್ಮ ರಾಜ್ಯವನ್ನು ಮರಳಿ ಗಳಿಸಬೇಕೆಂದು ಎತ್ತುಗಡೆ ಮಾಡಿದರು. ಇಂಗವಳ್ಳಿಯ ಹತ್ತಿರ ಯುದ್ಧವೂ ಆಯಿತು. ಆದರೆ ಕೊನೆಗೆ ರಾಷ್ಟ್ರಕೂಟರೇ ಗೆದ್ದರು. ನೃಪತುಂಗನು ತನ್ನ ರಾಜ್ಯದಲ್ಲಿ ಬೇರೆ ಬೇರೆ ಭಾಗಗಳನ್ನು ಮಾಡಿ, ಅವುಗಳಿಗೆ ಬೇರೆ ಬೇರೆ ಮಹಾಮಂಡಲೇಶ್ವರರನ್ನು ನಿಯಮಿಸಿದನು. ಕೊಂಕಣ, ಮಂತ್ರವಾಡಿ, ಬನವಾಸಿ, ಕುಂದರಿಗೆ, ಪುಲಿಗೆರೆ ಇವು ಅವನ ರಾಜ್ಯದಲ್ಲಿಯ ಮಂಡಲಗಳ ಹೆಸರುಗಳು. ತನ್ನ ಮಗ ಕೃಷ್ಣನನ್ನು ತನ್ನ ಕಣ್ಣರಿಕೆಯಲ್ಲಿಟ್ಟುಕೊಂಡು, ರಾಜ್ಯವಾಳುವ ಶಿಕ್ಷಣವನ್ನು ಕೊಟ್ಟನು. ತನ್ನ ಆಳಿಕೆಯಲ್ಲಿ ಕಾವೇರಿಯಿಂದ ಗೋದಾವರಿಯ ವರೆಗೆ ಕರ್ನಾಟಕದ ಸೀಮೆ ಇತ್ತೆಂದು ಅವನು ಬರೆದ 'ಕನ್ನಡ ಕವಿರಾಜ ಮಾರ್ಗ' ವೆಂಬ ಅಲಂಕಾರ ಶಾಸ್ತ್ರದ ಗ್ರಂಥದಲ್ಲಿ ಹೇಳಿಕೊಂಡಿರುವನು.

ಇವನು ಶೂರನಿದ್ದಂತೆ, ಪಂಡಿತನೂ ಇದ್ದನು; ಉಭಯ ಭಾಷಾ ವಿಶಾರದನಾಗಿದ್ದನು. ಅಂದರೆ ಇವನು ಸಂಸ್ಕೃತ, ಕನ್ನಡ ಎರಡೂ ಭಾಷೆಗಳಲ್ಲಿ ಪಂಡಿತನಿದ್ದನು. ತನ್ನ ಓಲಗದಲ್ಲಿ ಸಂಸ್ಕೃತ, ಕನ್ನಡ ಪಂಡಿತರಿಗೆ ಆಶ್ರಯ ಕೊಟ್ಟಿದ್ದನು. ಈತನು ಧರ್ಮದಿಂದ ವೈದಿಕನಿದ್ದರೂ ಜೈನರಿಗೆ ಆಶ್ರಯ ಕೊಟ್ಟಿದ್ದನು. ತಂದೆಯ ಅಪೇಕ್ಷೆಯನ್ನು ಪೂರ್ಣಗೊಳಿಸಲು ಮಳಖೇಡವನ್ನು ತನ್ನ ರಾಜಧಾನಿಯನ್ನಾಗಿ ಮಾಡಿ ಅಲ್ಲಿ ರಾಜಬೀದಿ, ಹೂದೋಟ, ಪೇಟೆಯ ಸಾಲು, ಸರೋವರ, ಧರ್ಮಶಾಲೆ, ಅಗ್ರಹಾರ, ಮಠ ಮುಂತಾದವುಗಳನ್ನು ಕಟ್ಟಿಸಿ, ಇಂದ್ರನ ಅಮರಾವತಿಯನ್ನು ಹೋಲುವಂತೆ ಅದನ್ನು ಸಿಂಗರಿಸಿದನು. ಆದರೆ, ಮಳಖೇಡವು ಮಾಳವೆಯರ ಸುಲಿಗೆಗೀಡಾಗಿ ಹಾಳಾಯಿತು.

ನೃಪತುಂಗನು ಮುಪ್ಪಿನವನಾದ ಮೇಲೆ ತನ್ನ ಮಗನಾದ ಕೃಷ್ಣನಿಗೆ

ಪಟ್ಟಗಟ್ಟಿ, ತನ್ನ ಉಳಿದ ಆಯುಷ್ಯವನ್ನು ದೇವರ ಧ್ಯಾನದಲ್ಲಿ ಕಳೆದನು ಇವನು ಒಟ್ಟಿಗೆ ೬೪ ವರುಷ ಒಳ್ಳೆ ಪ್ರಜಾರಂಜಕನಾಗಿ ರಾಜ್ಯವಾಳಿದನು.




## ಅಭ್ಯಸನಗಳು

೧ ತೆರವಿದ್ದ ಸ್ಥಳಗಳಲ್ಲಿ ಯೋಗ್ಯ ಶಬ್ದಗಳನ್ನು ತುಂಬಿ ಬರೆಯಿರಿ—

(ಅ) ನೃಪತುಂಗನು ತನ್ನ ರಾಜ್ಯದಲ್ಲಿ ಬೇರೆ ಬೇರೆ ಭಾಗಗಳನ್ನು ಮಾಡಿ ಅವುಗಳಿಗೆ............ಎಂದು ಹೆಸರಿಟ್ಟಿದ್ದನು.

(ಆ) ಪ್ರತಿಯೊಂದು ............ಕ್ಕೆ ಅಧಿಕಾರಿಯನ್ನಾಗಿ ಒಬ್ಬ........ನನ್ನು ನಿಯಮಿಸಿದ್ದನು.

(ಇ) ಇವನ ಕಾಲದಲ್ಲಿ ಕರ್ನಾಟಕದ ಸೀಮೆಯು............ಯಿಂದ ............ಯ ವರೆಗೆ ಇತ್ತು.

(ಈ) ಇವನು...............ವೆಂಬ ಅಲಂಕಾರ ಶಾಸ್ತ್ರದ ಗ್ರಂಥವನ್ನು ಬರೆದಿದ್ದಾನೆ.

(ಉ) ಇವನು ತನ್ನ ಓಲಗದಲ್ಲಿ ಸಂಸ್ಕೃತ, ಕನ್ನಡ............... ರಿಗ ಆಶ್ರಯ ಕೊಟ್ಟಿದ್ದನು

(ಊ) ಮಳಖೇಡವನ್ನು ಇಂದ್ರನ....... ....ಯನ್ನು ಹೋಲುವಂತೆ ಸಿಂಗರಿಸಿದನು.

(ಎ) ಇವನು ಒಟ್ಟಿಗೆ.... .......ವರ್ಷ ಒಳ್ಳೇ ಪ್ರಜಾರಂಜಕನಾಗಿ ರಾಜ್ಯವಾಳಿದನು.

---

# ೭. ಮುಮ್ಮಡಿ ಕೃಷ್ಣ

ನೃಪತುಂಗನ ತರುವಾಯ ನಾಲ್ಕೈದು ಮಂದಿ ಅರಸರು ಮಳಖೇಡ ದಲ್ಲಿ ಆಳಿದರು. ಅವರಲ್ಲಿ ಕಡೆಯವನಾದ ಮುಮ್ಮಡಿ ಕೃಷ್ಣನೇ ಶ್ರೇಷ್ಠನು. ತನ್ನ ಹಿಂದಿನ ಅರಸರ ಬುದ್ಧಿಗೇಡಿತನದಿಂದ ಸಡಿಲುಗೊಂಡ ತನ್ನ ರಾಜ್ಯದ ಕೀಲುಗಳನ್ನು ಇವನು ಮೆಲ್ಲಮೆಲ್ಲನೆ ಬಿಗಿದನು. ಸುತ್ತುಮುತ್ತಲಿನ ಅರಸ ರನ್ನು ತನ್ನ ಮಾಂಡಲಿಕರನ್ನಾಗಿ ಮಾಡಿಕೊಂಡು ತನ್ನ ದಂಡನ್ನು ಬಲಪಡಿಸಿ ದನು. ಆಮೇಲೆ ಎರಡನೆಯ ದೇಶದ ರಾಜರನ್ನು ಗೆಲ್ಲಲು ದಕ್ಷಿಣಕ್ಕೆ ಹೊರಟನು. ದಾರಿಯಲ್ಲಿ ಸಿಕ್ಕ ಚೇರ, ಚೋಳ, ಪಾಂಡ್ಯರನ್ನು ನುಗ್ಗು ಮಾಡಿ ಅವರಿಂದ ಕಪ್ಪಕಾಣಿಕೆಗಳನ್ನು ಎತ್ತಿ ಸಿಂಹಲ ದ್ವೀಪವನ್ನು ನುಗ್ಗಿದನು. ಅಲ್ಲಿಯ ಅರಸನು ಇವನ ಅಂಕಿತನಾದನು. ಬರುವಾಗ ರಾಮೇಶ್ವರದ ಹತ್ತಿರ ತನ್ನ ಜಯಸ್ತಂಭವನ್ನು ನಿಲ್ಲಿಸಿ ಮರಳಿದನು. ಕೆಲ ದಿನಗಳ ಬಳಿಕ ಗುರ್ಜರರ ಮೇಲೆ ಸಾಗಿ ಅವರನ್ನೂ ಸೋಲಿಸಿದನು. ಹೀಗೆ ಮುಮ್ಮಡಿ ಕೃಷ್ಣನು ತನ್ನ ಆಳಿಕೆಯಲ್ಲಿ ಕರ್ನಾಟಕದ ಕೀರ್ತಿಯನ್ನು ಬಹುಮಟ್ಟಿಗೆ ಬೆಳೆಯಿಸಿದನು.

ನೃಪತುಂಗನಂತೆ ಇವನಾದರೂ ವಿದ್ಯಾವಂತ; 'ಪೊನ್ನ' ಎಂಬ ಕವಿ ಯನ್ನು ತನ್ನ ಓಲಗಕ್ಕೆ ಕರೆಯಿಸಿಕೊಂಡು ಅವನಿಗೆ 'ಕವಿಚಕ್ರವರ್ತಿ' ಎಂಬ

ಬಿರುದು ಮತ್ತು ಬಾವುಲಿಗಳನ್ನು ಕೊಟ್ಟು ಬಹಳವಾಗಿ ಮರ್ಯಾದೆ ಮಾಡಿದನು. ತನ್ನ ರಾಜ್ಯದಲ್ಲಿಯ ಪ್ರಜೆಗಳಿಗೆ ಶಿಕ್ಷಣ ಸಿಗಬೇಕೆಂಬ ಉದ್ದೇಶದಿಂದ ವಿಜಾಪುರ ಜಿಲ್ಲೆಯಲ್ಲಿರುವ ಸಾಲೋಟಗಿ ಎಂಬಲ್ಲಿ ವಿಶ್ವವಿದ್ಯಾನಿಲಯವನ್ನು ಕಟ್ಟಿಸಿ, ಅಲ್ಲಿ ಕಲಿಯುವವರಿಗೆ ಊಟ–ಉಡಿಗೆಯ ವ್ಯವಸ್ಥೆಯನ್ನಿಟ್ಟಿದ್ದನು.

ಇವನ ಕಾಲದಲ್ಲಿಯೇ ಪುಲಿಗೆರೆ ( **ಈಗಿನ** ಲಕ್ಷ್ಮೇಶ್ವರ ) ಎಂಬಲ್ಲಿ ಮತ್ತೊಬ್ಬ ದೊಡ್ಡ ಕವಿಯು ಆಗಿಹೋದನು. ಅವನ ಹೆಸರು ಪಂಪ. ಅವನಿಗೆ ಆದಿಪಂಪನೆಂದೂ ಕರೆಯುತ್ತಾರೆ. ಇವನು ಆದಿಪುರಾಣವನ್ನೂ ಭಾರತವನ್ನೂ ಬರೆದನು. ಆದಿಪುರಾಣವು ಜೈನ ಧರ್ಮದ ಗ್ರಂಥವು. ಇವೆರಡೂ ಕನ್ನಡದಲ್ಲಿ ಉದ್ಗ್ರಂಥಗಳಾಗಿವೆ

ಮುಂದಿನ ಅರಸರು ಮುಮ್ಮಡಿ ಕೃಷ್ಣನಷ್ಟು ಗಟ್ಟಿಗರು ಆಗದ್ದರಿಂದ ರಾಷ್ಟ್ರಕೂಟರ ರಾಜ್ಯವು ಕಕ್ಕುಲನ ಕಾಲಕ್ಕೆ ಮತ್ತೆ ಚಾಲುಕ್ಯರ ಕೈಸೇರಿತು. ರಾಷ್ಟ್ರಕೂಟರು ಭಾರತದಲ್ಲಾಳುತ್ತಿದ್ದ ಅರಸರಲ್ಲಿ ಬಲಿಷ್ಠರಿದ್ದರು. ಆಗಿನ ಕಾಲದಲ್ಲಿ ಜಗತ್ತಿನಲ್ಲಾಳುತ್ತಿದ್ದ ಚಕ್ರವರ್ತಿಗಳಲ್ಲಿ ಇವರ ಹೆಸರು ಮುಖ್ಯವಾಗಿತ್ತು.

## ಅಭ್ಯಸನಗಳು

೧. ತೆರವಿದ್ದ ಸ್ಥಳಗಳಲ್ಲಿ ಯೋಗ್ಯ ಶಬ್ದಗಳನ್ನು ತುಂಬಿ ಬರೆಯಿರಿ:—

(ಅ) ದಕ್ಷಿಣದಲ್ಲಿ....................ರನ್ನು ನುಗ್ಗು ಮಾಡಿ ಅವರಿಂದ ಕಪ್ಪಕಾಣಿಕೆಗಳನ್ನು ಎತ್ತಿದನು

(ಆ) ಸಿಂಹಲ ದ್ವೀಪದಿಂದ ಮರಳಿ ಬರುವಾಗ....................ದ ಹತ್ತಿರ ತನ್ನ... ....... .....ವನ್ನು ನಿಲ್ಲಿಸಿದನು.

(ಇ) ನೃಪತುಂಗನಂತೆ ಇವನಾದರೂ........... .....ನಿದ್ದನು.

(ಈ) ................ಎಂಬ ಕವಿಯನ್ನು ತನ್ನ ಓಲಗಕ್ಕೆ ಕರೆಯಿಸಿಕೊಂಡು ಅವನಿಗೆ................ಎಂಬ ಬಿರುದನ್ನು ಕೊಟ್ಟನು.

(ಉ) ತನ್ನ ಪ್ರಜೆಗಳಿಗೆ ಶಿಕ್ಷಣ ಸಿಗಬೇಕೆಂಬ ಉದ್ದೇಶದಿಂದ ....................ಜಿಲ್ಲೆಯಲ್ಲಿರುವ...............ಎಂಬಲ್ಲಿ ................ ವನ್ನು ಕಟ್ಟಿಸಿದನು.

(ಊ) ವಿಶ್ವವಿದ್ಯಾನಿಲಯದಲ್ಲಿ ಕಲಿಯುವವರಿಗೆ. ............ಯ ವ್ಯವಸ್ಥೆಯನ್ನಿಟ್ಟಿದ್ದನು.

(ಎ) ಇವನ ಕಾಲದಲ್ಲಿ...................ಎಂಬಲ್ಲಿ..................ಎಂಬ ಮತ್ತೊಬ್ಬ ದೊಡ್ಡ ಕವಿಯು ಆಗಿಹೋದನು.

(ಏ) ಪಂಪನು........................ವನ್ನೂ..................ವನ್ನೂ.............. ಭಾಷೆಯಲ್ಲಿ ಬರೆದನು.

(ಐ) ಪಂಪನಿಗೆ...............ನೆಂದೂ ಕರೆಯುತ್ತಾರೆ.

## ೮. ಆದಿಪಂಪ

ಇವನ ಪೂರ್ವಜರು ಬಳ್ಳಾರಿ ಕಡೆಯವರು. ಇವನ ತಂದೆ ಅಭಿರಾಮ ದೇವನು. ಹೊಟ್ಟೆ ಹೊರಕೊಳ್ಳಲು ಲಕ್ಷ್ಮೇಶ್ವರಕ್ಕೆ ಬಂದು ಅಲ್ಲಿಯೇ ನೆಲೆಸಿ ದನು. ಲಕ್ಷ್ಮೇಶ್ವರಕ್ಕೆ ಆಗ ಪುಲಿಗೆರೆಯೆಂದು ಕರೆಯುತ್ತಿದ್ದರು. ಅಲ್ಲಿ ಚಾಲುಕ್ಯರ ವಂಶದ ಅರಿಕೇಸರಿ ಎಂಬ ಅರಸನು ಆಳುತ್ತಿದ್ದನು. ಆಗ ದೇವೇಂದ್ರಮುನಿ ಎಂಬವರು ಜೈನ ಮತದಲ್ಲಿ ಒಳ್ಳೇ ವಿದ್ವಾಂಸರೆಂದು ಹೆಸರಾಗಿದ್ದರು. ಅಭಿರಾಮದೇವನು ತನ್ನ ಮಗ ಪಂಪನನ್ನು ಅವರ ಬಳಿ ಯಲ್ಲಿ ವಿದ್ಯಾಭ್ಯಾಸಕ್ಕಾಗಿ ಇಟ್ಟನು. ಪಂಪನು ಬಲು ಚುರುಕು ಬುದ್ಧಿ ಯವನೂ ಒಳ್ಳೆಯ ಸ್ವಭಾವದವನೂ ಇದ್ದನು. ಇದರಿಂದ ಅವನು ಗುರು ಗಳಿಗೆ ಪ್ರೀತಿಯ ಶಿಷ್ಯನಾಗಿದ್ದನು. ಮುನಿಗಳು ಅರಿಕೇಸರಿಯ ಗುರುಗಳಾಗಿ ದ್ದರು. ಒಂದು ದಿನ ಮಾತಿಗೆ ಮಾತು ಹೊರಟಾಗ, ಮುನಿಗಳು ಅರಿಕೇಸರಿಗೆ ಪಂಪನ ವಿದ್ಯಾಬುದ್ಧಿಗಳ ಬಗೆಗೂ ಸ್ವಭಾವದ ಬಗೆಗೂ ಹೇಳಿದ್ದರು. ಕಲಿ ಯುವದೆಲ್ಲ ಮುಗಿದ ಮೇಲೆ ಪಂಪನು ಬನವಾಸಿಯಲ್ಲಿ ಬಹುದಿನ ಇದ್ದನು. ವಿದ್ವಾಂಸನಿದ್ದಷ್ಟು ಶೂರನೂ ಆಗಿದ್ದನು. ಕೆಲವು ಯುದ್ಧಗಳನ್ನಾಡಿ ಅನು ಭವವನ್ನು ಪಡೆದಿದ್ದನು.

ಅರಿಕೇಸರಿಯು ಬನವಾಸಿಯ ನಾಡನ್ನು ಗೆದ್ದನು. ಆಗ ಅರಿಕೇಸ ರಿಗೂ ಪಂಪನಿಗೂ ಸ್ನೇಹವಾಗಿ ಅದು ದಿನದಿನಕ್ಕೆ ಬೆಳೆಯಹತ್ತಿತು. ಪಂಪನ ವಿದ್ಯಾಬುದ್ಧಿಗಳಿಗೂ ಗುಣಗಳಿಗೂ ಮೆಚ್ಚಿ ಅರಸನು ಅವನಿಗೆ ರಾಜಾಶ್ರಯ

ವನ್ನು ಕೊಟ್ಟನು. ಅರಸನ ಮೆಚ್ಚುಗೆಯನ್ನು ಪಡೆಯಲು ಅವನನ್ನು ವರ್ಣಿಸುವ 'ವಿಕ್ರಮಾರ್ಜುನ ವಿಜಯ' ಎಂಬದೊಂದು ಉತ್ತಮ ಕಾವ್ಯವನ್ನು ಕನ್ನಡದಲ್ಲಿ ಬರೆದಿದ್ದಾನೆ. ಅದನ್ನೋದಿದವರೆಲ್ಲರೂ ಅವನ ಪಾಂಡಿತ್ಯಕ್ಕೆ ತಲೆದೂಗುತ್ತಾರೆ. 'ಆದಿ ಪುರಾಣ' ಎಂಬ ಗ್ರಂಥವನ್ನೂ ಬರೆದಿದ್ದಾನೆ. ಬನವಾಸಿಯು ಬಲು ಸೊಗಸಿನ ನಾಡು. ಅಲ್ಲಿಯ ಸೃಷ್ಟಿಸೌಂದರ್ಯವನ್ನು ಬಹು ಸೊಗಸಾಗಿ ಬಣ್ಣಿಸಿದ್ದಾನೆ. ಪುಲಿಗೆರೆಯಲ್ಲಿದ್ದಾಗ ಮೇಲಿಂದ ಮೇಲೆ ಬನವಾಸಿಯನ್ನೂ ಅದರ ಸುತ್ತುಮುತ್ತಲಿನ ಸೌಂದರ್ಯವನ್ನೂ ನೆನೆನೆನೆಸಿ



ಮಹಾಕವಿ ಆದಿ ಪಂಪ

ಹಾಡಿಕೊಂಡಿರುವನು. ಮುಂದಿನ ಜನ್ಮದಲ್ಲಿ ತನ್ನನ್ನು ಆ ನಾಡಿನಲ್ಲಿ ಮರಿ ದುಂಬಿಯಾಗಿ ಇಲ್ಲವೆ ಕೋಗಿಲೆಯಾಗಿ ಹುಟ್ಟಿಸಬೇಕೆಂದು ದೇವರಿಗೆ ಬೇಡಿ ಕೊಂಡಿದ್ದಾನೆ! ಅವನು ನಿಜವಾಗಿ ದೊಡ್ಡ ಕವಿಯು. ಆದುದರಿಂದ ಅವನಿಗೆ 'ಮಹಾಕವಿ ಪಂಪ' ಎಂದೂ ಕರೆಯುತ್ತಾರೆ. ಮುಂದೆ ಮತ್ತೊಬ್ಬ ಅಭಿ ನವ ಪಂಪನೆಂಬ ಕವಿಯು ಆದುದರಿಂದ ಇವನಿಗೆ 'ಆದಿ ಪಂಪ' ಎಂದು ಕರೆಯುವ ರೂಢಿಯಿದೆ.

### ಅಭ್ಯಸನಗಳು

ತೆರವಿದ್ದ ಸ್ಥಳಗಳಲ್ಲಿ ಯೋಗ್ಯ ಶಬ್ದಗಳನ್ನು ತುಂಬಿ ಬರೆಯಿರಿ:—

(ಅ) ಇವನ ತಂದೆಯ ಹೆಸರು..............ನು.

(ಆ) ಈಗಿನ ಲಕ್ಷ್ಮೇಶ್ವರವು ಆಗಿನ..............ಯು.

(ಇ) ಪಂಪನು..................ಎಂಬ ಗುರುಗಳ ಬಳಿಯಲ್ಲಿ ಅಭ್ಯಾಸ ಮಾಡಿದನು.

(ಈ) ಪುಲಿಗೆರೆಯ ಅರಸನ ಹೆಸರು..............ಯು.

(ಉ) ..............ಯು ಪಂಪನಿಗೆ ರಾಜಾಶ್ರಯವನ್ನು ಕೊಟ್ಟನು.

(ಊ) ಪಂಪನು.................ಮತ್ತು.................ಎಂಬೆರಡು ಗ್ರಂಥಗಳನ್ನು ಬರೆದನು.

---

## ೯. ತೈಲಪ

ರಾಷ್ಟ್ರಕೂಟರ ಪುಣ್ಯ ತೀರಿತು. ಅವರಲ್ಲಿ ಮುಂದೆ ವೀರರು ಹುಟ್ಟಲಿಲ್ಲ. ಮಾಳವದ ಅರಸರು ರಾಷ್ಟ್ರಕೂಟರ ಬಹು ದಿನದ ಶತ್ರುಗಳು. ರಾಷ್ಟ್ರಕೂಟರಲ್ಲಿ ಯಾರೂ ಬಂಟರು ಹುಟ್ಟದ್ದನ್ನು ಕಂಡು ಮಾಳವದ ಮುಂಜರಾಜನು ದೊಡ್ಡ ದಂಡಿನೊಡನೆ ಬಂದು ಮಳಖೇಡಕ್ಕೆ ಮುತ್ತಿಗೆ ಹಾಕಿದನು. ಕೋಟೆಯ ಗೋಡೆಗಳನ್ನೇರಿ ಕಾವಲುಗಾರರನ್ನು ಕೊಂದುಹಾಕಿ ಕೋಟೆಯ ಬಾಗಿಲುಗಳನ್ನು ತೆರೆಯಿಸಿ ದಂಡು ಸಹಿತವಾಗಿ ಒಳಗೆ ಹೊಕ್ಕನು. ಪಟ್ಟಣವನ್ನು ಪೂರ್ಣವಾಗಿ ಸುಲಿದು ಅರಮನೆಯನ್ನು ಹಾಳು ದೇಗುಲದಂತೆ ಮಾಡಿ ತನ್ನ ದೇಶಕ್ಕೆ ಮರಳಿ ಹೊರಟನು.

ಇದೇ ಕಾಲಕ್ಕೆ ಬಾದಾಮಿಯಲ್ಲಿ ಚಾಲುಕ್ಯರ ವಂಶದ ತೈಲಪನೆಂಬವನು ಆಳುತ್ತಿದ್ದನು. ರಾಷ್ಟ್ರಕೂಟರು ತಮ್ಮ ಹಿರಿಯರಿಂದ ಕಸಿದುಕೊಂಡ ರಾಜ್ಯವನ್ನು ತಿರುಗಿ ಸೆಳೆದುಕೊಳ್ಳಬೇಕೆಂದು ಅವನು ಹವಣಿಸುತ್ತಿದ್ದನು. ಮುಂಜರಾಜನು ಮಳಖೇಡವನ್ನು ಹಾಳುಗೆಡವಿದ ಸುದ್ದೀ ಕೇಳಿ ಇವನು ಕಿಡಿಕಿಡಿಯಾದನು. ತನ್ನ ಕೈಯಲ್ಲಿದ್ದಷ್ಟು ದಂಡನ್ನು ಕೂಡಿಸಿಕೊಂಡು ತನ್ನ ಬೆಂಬಲಕ್ಕೆ ಮತ್ತೆ ಕೆಲವು ಸರದಾರರನ್ನು ಇಟ್ಟುಕೊಂಡು ತನ್ನ ದೇಶಕ್ಕೆ ಆಗಲೇ ಮರಳಿ ಹೊರಟಿದ್ದ ಮುಂಜನನ್ನು ಬೆನ್ನಟ್ಟಿದನು. ಅವನು

ಮಳಖೇಡವನ್ನು ಸುಲಿದುಕೊಂಡು ಒಯ್ಯುತ್ತಿದ್ದ ಎಲ್ಲ ಧನಸಂಪತ್ತನ್ನು ದೋಚಿಕೊಂಡು ತಿರುಗಿ ಮಳಖೇಡಕ್ಕೆ ಬಂದನು. ಅಷ್ಟರೊಳಗೆ ರಾಜನಾಗಿದ್ದ ಕಕ್ಕಲನನ್ನು ಸೋಲಿಸಿ ಅವನ ಮಗಳಾದ ಜಾಕವ್ವೆಯನ್ನು ಮದುವೆಯಾದನು.

ಈಗ ಚಾಲುಕ್ಯರ ದೈವ ತೆರೆಯಿತು. ತೈಲಪನು ಇಷ್ಟಕ್ಕೇ ಸುಮ್ಮನಿರದೆ ಸವದತ್ತಿಯ ರಟ್ಟರನ್ನೂ ಕೊಂಕಣದ ಶಿಲಾಹಾರರನ್ನೂ ತಾನು ಹೇಳಿದಂತೆ ಕೇಳಲಿಕ್ಕೆ ಹಚ್ಚಿದನು ಮುಂದೆ ತನ್ನ ರಾಜ್ಯವನ್ನು ಹಬ್ಬಿಸಬೇಕೆಂಬ ಲವಲವಿಕೆಯಿಂದ ಉತ್ತರದಲ್ಲಿಯ ಗುಜರಾಥ, ಮಾಳವ, ನೇಪಾಳದ ಅರಸರನ್ನೂ, ದಕ್ಷಿಣದಲ್ಲಿಯ ಚೇರ, ಚೋಳ ರಾಜರನ್ನೂ ಗೆದ್ದನು. ಮಾಳವದ ಮುಂಜರಾಜನ ಮೇಲೆ ಅವನ ಕಣ್ಣಿತ್ತು. ಅವನನ್ನು ಹೇಗಾದರೂ ಮಾಡಿ "ನಮೋ ನಮೋ" ಅನ್ನಿಸಿ ಬಿಡಬೇಕೆಂದು ನಿಶ್ಚಯಿಸಿದ್ದನು. ಅವನನ್ನು ಮಾಳವ ದೇಶದಿಂದ ಸೆರೆ ಹಿಡಿದು ತಂದನು. ಮುಂಜರಾಜನು ಓಡಿಹೋಗಬೇಕೆಂದು ಮಾಡಿದ್ದನು. ಇದು ತೈಲಪನಿಗೆ ತಿಳಿದ ಕೂಡಲೆ ಅವನನ್ನು ಹಿಡಿದು ತರಿಸಿ, ಮನೆ ಮನೆ ಬಿಕ್ಕೆ ಬೇಡಿಸಿ, ಆಮೇಲೆ ಕೊಲ್ಲಿಸಿದನು. ಆ ಕಾಲದ ರಾಜರಿಗೆ ತೈಲಪನೆಂದರೆ ಹುಲಿಯಾಗಿ ಬಿಟ್ಟಿದ್ದನು.



ಶ್ರೀ ಗೋಮಟೇಶ್ವರ ಮೂರ್ತಿ

ಹೀಗೆ ತನ್ನ ಶತ್ರುಗಳಿಗೆ ಹುಲಿಯಾಗಿದ್ದರೂ, ವಿದ್ಯೆಯುಳ್ಳವರಿಗೆ ಆಕಳದಂತೆ ಇದ್ದನು. ಮುಧೋಳದ ಬಳೆಗಾರ ಮನೆತನದವನಾದ ರನ್ನನೆಂಬ

ಕವಿಯನ್ನು ತನ್ನ ಓಲಗಕ್ಕೆ ಕರೆಯಿಸಿಕೊಂಡು ಅವನಿಗೆ ಛತ್ರ ಚಾಮರಾದಿ ಗಳಿಂದ ಮರ್ಯಾದೆ ಮಾಡಿದ್ದಲ್ಲದೆ "ಕವಿ ಚಕ್ರವರ್ತಿ" ಎಂಬ ಬಿರುದು ಕೊಟ್ಟನು. ರನ್ನ ಕವಿಯು "ಗದಾಯುದ್ಧ" ವೆಂಬ ಕನ್ನಡ ಕಾವ್ಯದಲ್ಲಿ ತೈಲಪನನ್ನು ಬಾಯಿತುಂಬ ಹೊಗಳಿದ್ದಾನೆ.

ಈತನ ಕಾಲದಲ್ಲಿಯೇ ಶ್ರವಣಬೆಳಗೊಳದಲ್ಲಿ (ಈಗಿನ ಮೈಸೂರ ಸಂಸ್ಥಾನದಲ್ಲಿ) ರಾಚಮಲ್ಲನೆಂಬ ಗಂಗರಸನ ಮಂತ್ರಿಯಾದ ಚಾಮುಂಡ ರಾಜನು ಗೋಮಟೇಶ್ವರ ಎಂಬ ಅತ್ಯಂತ ಸುಂದರವಾದ ಜಿನಮೂರ್ತಿಯನ್ನು ಕೊರೆಯಿಸಿದನು. ಇಷ್ಟು ದೊಡ್ಡ ಮತ್ತು ಭವ್ಯ ಮೂರ್ತಿಯು ಏಶಿಯ ಖಂಡದೊಳಗೆ ಮತ್ತೊಂದಿಲ್ಲ. ಇದನ್ನು ನೋಡಲು ದೂರ ದೂರದಿಂದ ಜನರು ಬರುತ್ತಾರೆ.

## ಅಭ್ಯಸನಗಳು

೧. ತೆರವಿದ್ದ ಸ್ಥಳಗಳಲ್ಲಿ ಯೋಗ್ಯ ಶಬ್ದಗಳನ್ನು ತುಂಬಿ ಬರೆಯಿರಿ—

(ಅ) ತೈಲಪನು........ವಂಶದ ಅರಸನು.

(ಆ) ಮಾಳವದ ಮುಂಜರಾಜನು........ವನ್ನು ಸುಲಿದುಕೊಂಡು ಒಯ್ಯುತ್ತಿದ್ದ ಎಲ್ಲ........ನ್ನು ತೈಲಪನು ದೋಚಿಕೊಂಡು ಬಂದನು.

(ಇ) ಮಳಖೇಡದ ರಾಜನಾಗಿದ್ದ............ನನ್ನು ಸೋಲಿಸಿ ಅವನ ಮಗಳಾದ ........ಯನ್ನು ಲಗ್ನವಾದನು.

(ಈ) ತೈಲಪನನ್ನು ಸವದತ್ತಿಯ........ರನ್ನೂ ಕೊಂಕಣದ........ ರನ್ನೂ ತಾನು ಹೇಳಿದಂತೆ ಕೇಳಲು ಹಚ್ಚಿದನು.

(ಉ) ಶತ್ರುಗಳಿಗೆ...............ಯಾಗಿದ್ದರೂ, ವಿದ್ಯೆಯುಳ್ಳವರಿಗೆ ತೈಲಪನು.......ದಂತೆ ಇದ್ದನು.

(ಊ) ಮುಧೋಳದ........ನೆಂಬ ಕವಿಯನ್ನು ತನ್ನ............ಕ್ಕೆ ಕರೆಯಿಸಿಕೊಂಡು ಅವನಿಗೆ..........ಗಳಿಂದ ಮರ್ಯಾದೆ ಮಾಡಿದ್ದಲ್ಲದೆ,........ ಎಂಬ ಬಿರುದು ಕೊಟ್ಟನು.

(ಎ) ರನ್ನ ಕವಿಯು...........ವೆಂಬ ಕಾವ್ಯವನ್ನು ............ಭಾಷೆ ಯಲ್ಲಿ ಬರೆದಿದ್ದಾನೆ.

(ಏ) ಇವನ ಕಾಲದಲ್ಲಿ ರಾಚಮಲ್ಲನೆಂಬ ಗಂಗರಸನ ಮಂತ್ರಿಯಾದ .......ನು........ಎಂಬ ಸುಂದರ ಜಿನಮೂರ್ತಿಯನ್ನು........ದಲ್ಲಿ ಕೊರೆಸಿದನು.

# ೧೦. ಶಕಪುರುಷನಾದ ವಿಕ್ರಮಾದಿತ್ಯನು

ಚಾಲುಕ್ಯ ವಂಶದ ೧ನೆಯ ಸೋಮೇಶ್ವರನಿಗೆ ಇಮ್ಮಡಿ ಸೋಮೇಶ್ವರ, ಇಮ್ಮಡಿ ವಿಕ್ರಮಾದಿತ್ಯ, ಜಯಸಿಂಹರೆಂಬ ಮೂರು ಮಂದಿ ಮಕ್ಕಳಿದ್ದರು. ಇವರಲ್ಲಿ ನಡುವಿನವನೇ ನಮ್ಮ ಕಥಾನಾಯಕನು. ಇವನು ಚಿಕ್ಕಂದಿನಿಂದಲೇ ಪರಾಕ್ರಮಿಯಾಗಿದ್ದನು. ಚೋಳರನ್ನು ಬಗ್ಗುಬಡಿಯಲು ಇವನ ತಂದೆಯು ಒಮ್ಮೆ ಇವನನ್ನು ಚಿಕ್ಕವನಿರುವಾಗಲೇ ಕರಕೊಂಡು ಹೋಗಿದ್ದನು. ಅಣ್ಣೀಗೇರಿಯ ಹತ್ತರ ಈ ಕಾಳಗವಾಯಿತು. ಈ ಯುದ್ಧದಲ್ಲಿ ಇವನು ತನ್ನ ಶೌರ್ಯ-ಧೈರ್ಯ-ಸಾಹಸ-ಬುದ್ಧಿವಂತಿಕೆಗಳನ್ನು ಚನ್ನಾಗಿಯೇ ತೋರಿಸಿಕೊಟ್ಟನು. ವಯಸ್ಸಿಗೆ ಬಂದಮೇಲೆ ತನ್ನ ತಂದೆಯ ಅಪ್ಪಣೆ ಪಡೆದು ಬಲವಾದ ಕರ್ನಾಟಕ ದಂಡನ್ನು ಕಟ್ಟಿಕೊಂಡು ದಿಗ್ವಿಜಯಕ್ಕಾಗಿ ಉತ್ತರ ಭಾರತಕ್ಕೆ ಹೊರಟನು. ಮಾಳವ ದೇಶಕ್ಕೆ ಹೋಗಿ, ಅಲ್ಲಿಯ ರಾಜನನ್ನು ಕಾಡುತ್ತಿದ್ದ ಅರಸರನ್ನು ಮುರಿಬಡಿದನು. ಕನೋಜಕ್ಕೆ ಹೋಗಿ, ಚಂದ್ರಸೇನನೆಂಬ ಕರ್ನಾಟಕ ವೀರನನ್ನು ಪಟ್ಟಕ್ಕೆ ಕುಳ್ಳಿರಿಸಿ, ಬಂಗಾಲದೇಶಕ್ಕೆ ನಡೆದನು. ಬಂಗಾಲ, ಬಿಹಾರ, ಅಸಾಮು, ನೇಪಾಳಗಳನ್ನು ಗೆದ್ದು, ಅಲ್ಲಿ ನಾನ್ಯದೇವನೆಂಬ ತನ್ನ ಕನ್ನಡ ದಂಡನಾಯಕನನ್ನು ಸಾಮಂತ ರಾಜನನ್ನಾಗಿ ಮಾಡಿ, ತನ್ನ ದೇಶಕ್ಕೆ ತೆರಳಿದನು. ಅಸಾಮು, ಬಂಗಾಲ, ನೇಪಾಳಗಳಲ್ಲಿ ಕನ್ನಡಿಗರ ಪತಾಕೆಯನ್ನು ಹಾರಾಡಿಸಿದವನು ಇವನೊಬ್ಬನೇ. ಹೀಗೆ ತನ್ನ ಕಣ್ಣಿಗೆ ಬಿದ್ದ ರಾಜರಿಂದ ಕಪ್ಪಕಾಣಿಕೆ ಎತ್ತಿ, ಅವರನ್ನು ತನ್ನ ಮಾಂಡಲಿಕರನ್ನಾಗಿ ಮಾಡುತ್ತ, ಉತ್ತರ ಭಾರತವನ್ನೆಲ್ಲ ಸುತ್ತಾಡಿ ತನ್ನ ಹಳೆಯ ರಾಜಧಾನಿಯಾದ ಬಳ್ಳಿಗಾವಿಗೆ ಬಂದನು.

ಮುಂದೆ ಕೆಲದಿನಗಳ ತರುವಾಯ ಇವನ ತಂದೆ ವಿಷಮಜ್ವರದಿಂದ ತೀರಿಕೊಂಡನು. ಆವನ ಹಿರಿಯ ಮಗ ಇಮ್ಮಡಿ ಸೋಮೇಶ್ವರನು ಪಟ್ಟಕ್ಕೆ ಬಂದನು. ವಿಕ್ರಮನು ತನ್ನ ಅಣ್ಣನಿಗಿಂತ ಶೂರನಿದ್ದರೂ ತಾನೇ ಅರಸನಾಗಬೇಕೆಂಬ ದುರಾಶೆಯು ಅವನಲ್ಲಿರಲಿಲ್ಲ. ತಂದೆಯು ಇದ್ದಾಗ ಹೇಗೋ ಹಾಗೆಯೇ ಅಣ್ಣನ ಆಳಿಕೆಯಲ್ಲಿಯೂ ನಾನಾ ದೇಶಗಳಿಗೆ ಹೋಗಿ ಅವುಗಳನ್ನು ಗೆದ್ದು ಸಿಕ್ಕ ಸಂಪತ್ತನ್ನು ಅಣ್ಣನಿಗೆ ಒಪ್ಪಿಸುವದರಲ್ಲಿಯೇ ಸಂತೋಷಬಡುತ್ತಿದ್ದನು. ತನ್ನ ಅಣ್ಣನೆಂದರೆ ತಂದೆಯೆಂದು ಭಾವಿಸಿ ಎಳ್ಳಷ್ಟೂ ಸ್ವಾರ್ಥದ

ಕಲ್ಪನೆಯಿಲ್ಲದೆ ನಡೆಯುತ್ತಿದ್ದನು. ಆದರೆ, ಇಮ್ಮಡಿ ಸೋಮೇಶ್ವರನು ದೊಡ್ಡ ಮನಸ್ಸಿನವನಿದ್ದಿಲ್ಲ. ಅವನು ಹೇಡಿಯೂ, ಸ್ವಾರ್ಥಿಯೂ, ಹೊಟ್ಟೆಕಿಚ್ಚಿನವನೂ ಇದ್ದನು. ಈ ದುರ್ಗುಣಗಳೆಲ್ಲ ಬರಬರುತ್ತ ಜನರಿಗೆ ಗೊತ್ತಾಗಿ ಅವನು ಎಲ್ಲರಿಗೂ ಬೇಡಾದನು. ತನ್ನ ತಮ್ಮಂದಿರನ್ನು ಸೆರೆಹಿಡಿಯಬೇಕೆಂಬ ಒಳಸಂಚನ್ನು ಹೂಡಿದ್ದನು; ಆದರೆ ಅದು ಸಾಧಿಸಲಿಲ್ಲ.

ಕಲ್ಯಾಣ ಚಾಲುಕ್ಯ ವಿಕ್ರಮಾಂಕನ ರಾಜ್ಯ.

ವಿಕ್ರಮಾಂಕನ ರಾಜ್ಯವಿಸ್ತಾರ

ವಿಕ್ರಮನು ದೊಡ್ಡ ದಂಡು ಕಟ್ಟಿಕೊಂಡು ದಕ್ಷಿಣ ಭಾರತದಲ್ಲಿ ದಿಗ್ವಿಜಯಕ್ಕೆ ಹೊರಟನು. ಶಿಲಾಹಾರ, ಕದಂಬ, ಕೇರಳ ರಾಜ್ಯಗಳನ್ನು ಗೆದ್ದು ಅವರಿಂದ ಲೆಕ್ಕವಿಲ್ಲದಷ್ಟು ಕಪ್ಪಕಾಣಿಕೆ ಎತ್ತಿ ಚೋಳರಾಜ್ಯದಲ್ಲಿ ಹೊಕ್ಕನು.

ವಿಕ್ರಮನ ಪರಾಕ್ರಮವನ್ನು ಕೇಳಿ, ಚೋಳರಾಜನು ಒಪ್ಪಂದ ಮಾಡಿಕೊಂಡು ತನ್ನ ಮಗಳನ್ನು ಅವನಿಗೆ ಲಗ್ನ ಮಾಡಿಕೊಟ್ಟನು. ಅಲ್ಲಿಂದ ಹೊರಟು ವಿಕ್ರಮನು ಕೆಲದಿನ ತನ್ನ ರಾಜಧಾನಿಯಾದ ಕಂಪಲಿಯಲ್ಲಿದ್ದುಕೊಂಡನು.

ವಿಕ್ರಮನ ಪರಾಕ್ರಮವನ್ನು ನೋಡಿ, ಇಮ್ಮಡಿ ಸೋಮೇಶ್ವರನ ಹೊಟ್ಟೆ ಕಿಚ್ಚು ದಿನದಿನಕ್ಕೆ ಬೆಳೆಯಹತ್ತಿತು. ವಿಕ್ರಮನ ವೈರಿಯಾದ ರಾಜಿಗನೆಂಬ ಚಾಲುಕ್ಯರ ಅರಸನನ್ನು ತನ್ನ ಸಹಾಯಕ್ಕೆ ಕರಕೊಂಡು ಒಂದು ದೊಡ್ಡ ದಂಡಿನೊಡನೆ ವಿಕ್ರಮನ ಮೇಲೇರಿ ಹೋದನು. ವಿಕ್ರಮನ ಮುಂದೆ ಇವರ ಆಟ ನಡೆಯಲಿಲ್ಲ. ರಾಜಿಗನು ಹೆದರಿ ಓಡಿ ಹೋದನು; ಸೋಮೇಶ್ವರನು ಸೆರೆಸಿಕ್ಕನು. ಅವನನ್ನು ಕಟ್ಟಿಕೊಂಡು ಯಾದಗಿರಿಗೆ ಹೋದನು. ಅಲ್ಲಿಗೆ



ಹೋದ ಬಳಿಕ, ವಿಕ್ರಮನು ತಾನೇ ಕ್ರಿ. ಶ. ೧೦೭೬ರಲ್ಲಿ ಚಾಲುಕ್ಯ ಸಿಂಹಾಸನದ ಮೇಲೆ ಕುಳಿತು ತನ್ನ ಹೆಸರಿನ ಶಕವನ್ನು ಅಂದಿನಿಂದ ಪ್ರಾರಂಭಿಸಿದನು. ಇವನು ಕರ್ನಾಟಕ, ದಕ್ಷಿಣಭಾರತ, ಮತ್ತು ಉತ್ತರಭಾರತದ ಕೆಲವು ಭಾಗಕ್ಕೆ ಚಕ್ರವರ್ತಿಯಾದನು. ಆ ಕಾಲಕ್ಕೆ ಇವನೊಬ್ಬ ಸಿಂಹನಂತಿದ್ದನು. ಇವನಿಗೆ ಸೋಲು ಎಂಬುದು ಗೊತ್ತಿರಲಿಲ್ಲ. ಕರ್ಹಾಡದ ಶಿಲಾಹಾರ ರಾಜನ ಮಗಳಾದ ಚಂದಲದೇವಿಯ ಸ್ವಯಂವರಕ್ಕೆ ಹೋಗಿದ್ದನು. ಇದಕ್ಕೆ ಇಡಿಯ

ಭರತಖಂಡದ ನೂರಾರು ಮಂದಿ ಅರಸರು ಬಂದಿದ್ದರು. ಚಂದಲದೇವಿಯು ವಿಕ್ರಮನಿಗೇ ಮಾಲೆ ಹಾಕಿದಳು. ಇವನು ೫೦ ವರುಷ ಆಳಿದನು. ಇವನ ಆಳಿಕೆಯೆಂದರೆ ಸುಖದ ಸುಗ್ಗಿ.

ಇವನು ಶೂರನಿದ್ದಂತೆ, ವಿದ್ಯಾಪಕ್ಷಪಾತಿಯೂ ಆಗಿದ್ದನು. ತನ್ನ ಓಲಗದಲ್ಲಿ ವಿಜ್ಞಾನೇಶ್ವರ, ಬಿಲ್ಹಣ ಮುಂತಾದ ಪಂಡಿತರಿಗೂ ಕವಿಗಳಿಗೂ ಆಶ್ರಯ ಕೊಟ್ಟಿದ್ದನು.

## ಅಭ್ಯಸನಗಳು

೧. ಇವನು ದಿಗ್ವಿಜಯ ಮಾಡಿ ಗೆದ್ದ ದೇಶಗಳಾವವು?

೨. ಕೆಳಗೆ ಕೆಲವು ಅಪೂರ್ಣ ವಾಕ್ಯಗಳನ್ನು ಕೊಟ್ಟಿದೆ. ಪ್ರತಿಯೊಂದರ ಕೊನೆಗೆ ಕಂಸಿನಲ್ಲಿ ಕೆಲವು ಶಬ್ದಗಳನ್ನು ಕೊಟ್ಟಿದೆ. ಅವುಗಳಲ್ಲಿ ಯೋಗ್ಯವಾದದ್ದನ್ನು ಆಯ್ದುಕೊಂಡು ವಾಕ್ಯ ಪೂರ್ಣಮಾಡಿ ಬರೆಯಿರಿ—

(ಅ) ವಿಕ್ರಮಾದಿತ್ಯನು............ವರುಷ ರಾಜ್ಯವಾಳಿದನು. (೪೦, ೫೦, ೬೦)

(ಆ) ಕನೋಜವನ್ನು ಗೆದ್ದು, ಅಲ್ಲಿ............ಎಂಬ ಕರ್ನಾಟಕದ ವೀರನನ್ನು ಪಟ್ಟಕ್ಕೆ ಕುಳ್ಳಿರಿಸಿದನು. (ನಾನ್ಯದೇವ, ಚಂದ್ರದೇವ)

(ಇ) ಕ್ರಿ.ಶ. ................ರಲ್ಲಿ ಸಿಂಹಾಸನವನ್ನೇರಿ ತನ್ನ ಹೆಸರಿನ ಶಕವನ್ನು ಪ್ರಾರಂಭಿಸಿದನು. (೧೦೭೬, ೧೧೭೬, ೧೨೭೬)

(ಈ) ಕರ್ಹಾಡದ ಶಿಲಾಹಾರ ರಾಜನ ಮಗಳಾದ...............ಯ ಸ್ವಯಂವರಕ್ಕೆ ವಿಕ್ರಮನು ಹೋಗಿದ್ದನು. (ಲಕ್ಷ್ಮೀದೇವಿ, ಚಂದಲದೇವಿ)

(ಉ) ಉತ್ತರ ಭಾರತದ ದಿಗ್ವಿಜಯವನ್ನು ಮುಗಿಸಿಕೊಂಡು ತನ್ನ ರಾಜಧಾನಿಯಾದ... ........ಗೆ ಬಂದನು. (ಬಳ್ಳಿಗಾವಿ, ಕಂಪಲಿ)

# ೧೧. ಸಳನು

ಈಗಿನ ಮೈಸೂರು ಸಂಸ್ಥಾನದ, ಕಡೂರು ಜಿಲ್ಲೆಯಲ್ಲಿ ಅಂಗಡಿ ಎಂಬ ದೊಂದು ಗ್ರಾಮ. ಈ ಗ್ರಾಮದಲ್ಲಿ ಸಳನೆಂಬ ಒಬ್ಬ ವೀರ ಜೈನ ತರುಣ ನಿದ್ದನು. ಈ ಗ್ರಾಮದ ಸಮೀಪದಲ್ಲಿ ಒಂದು ದೊಡ್ಡ ಅಡವಿಯಿತ್ತು. ಆ ಅಡವಿಯ ಮಗ್ಗುಲಲ್ಲಿ ವಾಸಂತಿಕಾ ದೇವಿಯ ಗುಡಿಯಿತ್ತು. ಆ ಗುಡಿಯಲ್ಲಿ ಸುದತ್ತರೆಂಬ ಜೈನ ಮುನಿಗಳು ವಾಸಿಸುತ್ತಿದ್ದರು. ಇವರು ಸಳನ ಗುರುಗಳು. ವಾಡಿಕೆಯಂತೆ ಒಂದು ದಿನ ಸಳನು ಬೇಟೆಯಾಡಲು ಆ ಅಡವಿಗೆ ಹೋದನು. ಬೇಟೆಯಾಡಿ ದಣಿದು ಕಂಗಾಲಾಗಿ ವಾಸಂತಿಕಾ ದೇವಿಯ ಗುಡಿಯತ್ತ ದಣುವಾರಿಸಿಕೊಳ್ಳಲು ನಡೆದನು. ಅಲ್ಲಿ ಸುದತ್ತ ಮುನಿಗಳ ದರ್ಶನವನ್ನು ಪಡೆದು ಅವರ ಉಪದೇಶವನ್ನು ಕೇಳುತ್ತ ಕುಳಿತನು. ಇಷ್ಟರೊಳಗೆ ಹೆಬ್ಬುಲಿಯೊಂದು ಗುಡುಗು ಹೊಡೆಯುತ್ತ ಗುಡಿಯ ಆವಾರದಲ್ಲಿ ಪ್ರವೇಶಿಸಿತು. ಆಗ ಗುರುಗಳು 'ಸಳನೇ, ಹೊಯ್ಯು' ಎಂದು ಹೇಳಿದರು. ಕೂಡಲೆ ಸಳನು ತನ್ನ ಕೈಯಲ್ಲಿರುವ ಕಠಾರಿಯನ್ನು ಅದರ ಬಾಯಲ್ಲಿ ತುರುಕಿ ಇರಿದು



ಕೊಂದು ಹಾಕಿದನು. ಸಳನ ಈ ಪರಾಕ್ರಮಕ್ಕೆ ಮೆಚ್ಚಿ ಗುರುಗಳು ಅವನನ್ನು ಬಹಳವಾಗಿ ಕೊಂಡಾಡಿದರು. ಅಂದಿನಿಂದ ಅವನಿಗೆ ಹೊಯ್ಸಳ (ಹೊಯ್+ ಸಳ) ಎಂಬ ಅಡ್ಡ ಹೆಸರು ಬಂದಿತು.

ಈ ಸಮಯದಲ್ಲಿ ಕರ್ನಾಟಕದಲ್ಲಿ ಅಲ್ಲಲ್ಲಿ ಚಿಕ್ಕ ಅರಸರು ಆಳುತ್ತಿದ್ದರು. ಇವರಲ್ಲಿ ಒಕ್ಕಟ್ಟು ಇರಲಿಲ್ಲ. ಈ ಸಂಧಿಯನ್ನು ಸಾಧಿಸಿ, ತಮಿಳುನಾಡಿನ ಚೋಳರಾಜನು ಸರತಿಗೆ ಒಬ್ಬೊಬ್ಬನಂತೆ ಇವರನ್ನು ಮುರಿಬಡಿಯುತ್ತ ಇಡಿಯ ಕನ್ನಡನಾಡನ್ನು ಕೈವಶ ಮಾಡಿಕೊಂಡಿದ್ದನು. ಈ ಸ್ಥಿತಿಯನ್ನು ನೋಡಿ ಸಳನಂತಹ ವೀರ ಪುರುಷನಿಗೆ ಸಹನವಾಗುವದೆಂತು ? ಹಗಲಿರುಳು ತನ್ನ ತಾಯ್ನಾಡನ್ನು ಹೇಗೆ ಉಳಿಸಿಕೊಳ್ಳಬೇಕೆಂಬ ಚಿಂತೆಯು ಅವನನ್ನು ಬಲವಾಗಿ ಬಾಧಿಸತೊಡಗಿತು. ಸೈನಿಕರನ್ನು ಕೂಡಿಸಿ ಅವರಿಗೆ ಶಿಕ್ಷಣವನ್ನು ಕೊಡಹತ್ತಿದನು. ಈ ಕಾರ್ಯದಲ್ಲಿ ಈತನ ಗುರುಗಳಾದ ಸುದತ್ತ ಮುನಿಗಳು ಮೇಲಿಂದ ಮೇಲೆ ಉಪದೇಶವನ್ನು ಕೊಟ್ಟು ಸಹಾಯ ಮಾಡಿದರು. ಸಳನಿಗೂ ಚೋಳ ರಾಜನಿಗೂ ಯುದ್ಧವಾಯಿತು. ಆದರಲ್ಲಿ ಚೋಳರಾಜನು ಸೋತು ಓಡಿಹೋದನು. ತಾಯ್ನಾಡೆಲ್ಲ ಸಳನ ಕೈಸೇರಿತು. ನೆರೆಹೊರೆಯ ನಾಡುಗಳನ್ನು ಗೆದ್ದು ತನ್ನ ರಾಜ್ಯವನ್ನು ವಿಸ್ತರಿಸಿದನು. ಈ ಮನೆತನದ ಅರಸರು ಮೊದಲು ಚಾಲುಕ್ಯರ ಮಾಂಡಲಿಕರಾಗಿದ್ದು ಬರುಬರುತ್ತ ಸ್ವತಂತ್ರ ರಾದರು. ಈ ಮನೆತನವು ವಿಷ್ಣುವರ್ಧನ ಮತ್ತು ವೀರಬಲ್ಲಾಳ ಇವರಿಬ್ಬರ ಆಳಿಕೆಯಲ್ಲಿ ಬಹಳ ವೈಭವಕ್ಕೇರಿತು.

## ಅಭ್ಯಸನಗಳು

೧. ಸಳನಿಗೆ ಹೊಯ್ಸಳ ಎಂಬ ಅಡ್ಡ ಹೆಸರು ಏಕೆ ಬಂದಿತು ?

೨. ತೆರವಿದ್ದ ಸ್ಥಳಗಳಲ್ಲಿ ಯೋಗ್ಯ ಶಬ್ದಗಳನ್ನು ತುಂಬಿ ಬರೆಯಿರಿ—

(ಅ) ಈಗಿನ ಮೈಸೂರು ಸಂಸ್ಥಾನದ... ....................ಜಿಲ್ಲೆಯಲ್ಲಿ ...........ಎಂಬದೊಂದು ಗ್ರಾಮವಿದೆ.

(ಆ) ಈ ಗ್ರಾಮದಲ್ಲಿ...... ........ನೆಂಬ ಒಬ್ಬ................ತರುಣ ನಿದ್ದನು.

(ಇ) ಈ ಗ್ರಾಮದ ಹತ್ತಿರ..........ಯ ಮಗ್ಗುಲಲ್ಲಿ..............ದೇವಿಯ ಗುಡಿಯಿತ್ತು.

(ಈ) ಆ ಗುಡಿಯಲ್ಲಿ..............ರೆಂಬ ಜೈನ...........ಗಳು ವಾಸಿಸುತ್ತಿದ್ದರು.

(ಉ) ಗುರುಗಳು........ನಿಗೆ ಉಪದೇಶ ಮಾಡುತ್ತಿರುವಾಗ........ಯೊಂದು ಆ ಗುಡಿಯ...........ದಲ್ಲಿ..........ಹೊಡೆಯುತ್ತ ಪ್ರವೇಶಿಸಿತು.

(ಊ) ಗುರುಗಳು ತಮ್ಮ ಹತ್ತಿರವಿದ್ದ...........ಯನ್ನು........ನಿಗೆ ಕೊಟ್ಟು........ಎಂದು ಅಂದರು.

(ಎ) ಅಂದಿನಿಂದ ಸಳನಿಗೆ........ಎಂಬ ಅಡ್ಡ ಹೆಸರು ಬಂದಿತು.

---

# ೧೨. ವಿಷ್ಣುವರ್ಧನ

ಇವನ ಮೊದಲಿನ ಹೆಸರು ಬಿಟ್ಟಿದೇವ. ಈತನು ಪಟ್ಟಕ್ಕೆ ಬಂದಾಗ, ಹೊಯ್ಸಳ ಸಿಂಹಾಸನವು ಸ್ಥಾಪಿಸಲ್ಪಟ್ಟು ಒಂದು ನೂರು ವರುಷಗಳಾಗಿದ್ದವು. ಇವನ ಅಜ್ಜ, ಮುತ್ತಂದಿರಾದ ವಿನಯಾದಿತ್ಯ, ಎರೆಯಂಗರಂತಹ ವೀರರು ಹುಟ್ಟಿ ಹೊಯ್ಸಳ ರಾಜ್ಯವನ್ನು ಬಲುಮಟ್ಟಿಗೆ ಹಬ್ಬಿಸಿದರು. ಚಾಲುಕ್ಯರಿಗೂ ಇವರಿಗೂ ಬಹುದಿನಗಳಿಂದ ಬಾಂಧವ್ಯ, ಪ್ರೀತಿಗಳಿದ್ದರೂ, ವಿಷ್ಣುವರ್ಧನನು ಚಾಲುಕ್ಯ ವಿಕ್ರಮನ ಕಾಲಕ್ಕೆ ಸ್ವತಂತ್ರನಾಗಲು ಹವಣಿಸಿದನು. ಆದರೆ ಆ ಜಗಮಲ್ಲನ ಮುಂದೆ ಈ ಮಲ್ಲನ ಆಟವು ನಡೆಯಲಿಲ್ಲ. ಅವನು ತೀರಿಕೊಂಡ ತರುವಾಯ ಸೋಮೇಶ್ವರನನ್ನು ಯುದ್ಧದಲ್ಲಿ ಸೋಲಿಸಿ, ಹಾನಗಲ್ಲು, ಉಚ್ಚಂಗಿದುರ್ಗ, ಹಲಸಿಗೆ, ಪುಲಿಗೆರೆ, ಬನವಾಸಿ ಮುಂತಾದವುಗಳನ್ನು ಗೆದ್ದನು. ಪಾಂಡ್ಯರನ್ನು ಮುರಿಬಡಿದು, ತುಳುವರನ್ನು ತನ್ನ ನಾಡಿಗೆ ಸೇರಿಸಿಕೊಂಡನು.* ಮೈಸೂರ ಸೀಮೆಯಲ್ಲಿದ್ದ ತಲಕಾಡು ಮತ್ತು ಯಾದವಪುರ, ಬಂಕಾಪುರ, ದ್ವಾರಸಮುದ್ರ ಇವೇ ಇವನ ರಾಜಧಾನಿಗಳು.

ಇವನ ಕಾಲಕ್ಕೆ ಚೋಳರ ರಾಜ್ಯದಲ್ಲಿ ಶ್ರೀ ರಾಮಾನುಜಾಚಾರ್ಯರೆಂಬವರು ವಿಶಿಷ್ಟಾದ್ವೈತವೆಂಬ ಶ್ರೀವೈಷ್ಣವ ಮತವನ್ನು ಹೊರಡಿಸಿ ಅದನ್ನು ಪ್ರಚಾರ ಮಾಡತೊಡಗಿದ್ದರು. ಇದು ಚೋಳರಾಜನ ಮನಸ್ಸಿಗೆ ಬರಲಿಲ್ಲ

ವಾದ್ದರಿಂದ, ಅವನು ಆಚಾರ್ಯರಿಗೆ ಇಲ್ಲದ ತೊಂದರೆ ಕೊಡಹತ್ತಿದನು. ಆಚಾರ್ಯರು ಬೇಸತ್ತು ಚೋಳ ರಾಜ್ಯವನ್ನು ಬಿಟ್ಟು ವಿಷ್ಣುವರ್ಧನನ ಆಶ್ರಯ ವನ್ನು ಬಯಸಿದರು. ಇವನು ಅವರನ್ನು ತನ್ನ ರಾಜ್ಯದಲ್ಲಿಟ್ಟುಕೊಂಡು ತಾನೂ ಶ್ರೀವೈಷ್ಣವನಾದನು; ತನ್ನ ಮೊದಲಿನ ಹೆಸರಾದ ಬಿಟ್ಟಿದೇವನೆಂಬ ಹೆಸರನ್ನು ಬಿಟ್ಟು ವಿಷ್ಣುವರ್ಧನ ಎಂಬ ಹೆಸರನ್ನಿಟ್ಟುಕೊಂಡನು. ಇವನ ಓಲಗದಲ್ಲಿ ನಾಗಚಂದ್ರ, ರಾಜಾದಿತ್ಯ, ವಿಷ್ಣುದಂಡಾಧಿಪ, ಕಂತಿ ಮುಂತಾದ ಕವಿಗಳಿದ್ದರು. ಇವನು ಬಂಕಾಪುರದಲ್ಲಿ ಮಡಿದನು.

### ಅಭ್ಯಸನಗಳು

೧. ತೆರವಿದ್ದ ಸ್ಥಳಗಳಲ್ಲಿ ಯೋಗ್ಯ ಶಬ್ದಗಳನ್ನು ತುಂಬಿ ಬರೆಯಿರಿ—

(ಅ) ವಿಷ್ಣುವರ್ಧನನ ಮೊದಲಿನ ಹೆಸರು ..........

(ಆ) ಇವನ ರಾಜಧಾನಿಗಳಾವವೆಂದರೆ...........

(ಇ) ಇವನ ಕಾಲಕ್ಕೆ ಶ್ರೀ...............ರು ...............ವೆಂಬ ಶ್ರೀ ವೈಷ್ಣವ ಮತವನ್ನು ಪ್ರಾರಂಭಿಸಿದರು.

(ಈ) ...........ರಾಜನು ಆಚಾರ್ಯರಿಗೆ ತೊಂದರೆ ಕೊಟ್ಟಿದ್ದರಿಂದ, ಅವರು...............ನ ಆಶ್ರಯವನ್ನು ಬಯಸಿದರು.

(ಉ) ಇವನ ಓಲಗದಲ್ಲಿ..................ಮುಂತಾದ ಕವಿಗಳಿದ್ದರು.

(ಊ) ಇವನು ..............ದಲ್ಲಿ ಮಡಿದನು.

## ೧೩. ಜಕ್ಕಣಾಚಾರ್ಯರು

ಜಕ್ಕಣಾಚಾರ್ಯರು ನಮ್ಮ ದೇಶದಲ್ಲಿ ಹೆಸರಾದ ಶಿಲ್ಪಿಗಳಾಗಿದ್ದರು. ಇವರು ಕರ್ನಾಟಕದಲ್ಲಿ ಕೆಲವು ಕಡೆಗೆ ಕಲ್ಲಿನ ಗುಡಿಗಳನ್ನು ಕಟ್ಟಿದ್ದಾರೆ. ಇವರು ಕಟ್ಟಿದ ಮಾದರಿಯ ಗುಡಿಗಳಿಗೆ ಜಕ್ಕಣಾಚಾರ್ಯರ ಗುಡಿಗಳೆಂದು ಹೆಸರು ಬಂದಿವೆ. ಇಂತಹ ಗುಡಿಗಳು ಕರ್ನಾಟಕದಲ್ಲಿ ಹಲವು ಕಡೆಗೆ

ದೊರಕುತ್ತವೆ. ಕಲ್ಲಿನ ಕೆತ್ತುಗೆಯ ಮತ್ತು ಕುಸುರಿನ ಕೆಲಸಗಳು ಹೊಗಳ ತಕ್ಕಂತಹವುಗಳಾಗಿವೆ.

ಜಕ್ಕಣಾಚಾರ್ಯರು ಮೈಸೂರ ಸೀಮೆಯಲ್ಲಿರುವ ತುಮಕೂರು ಜಿಲ್ಲೆಯಲ್ಲಿ ಕೈದಾಳ ಎಂಬ ಊರಲ್ಲಿ ಹುಟ್ಟಿದರು. ಇವರು ಜ್ಯೋತಿಷ್ಯ ಶಾಸ್ತ್ರವನ್ನು ಚೆನ್ನಾಗಿ ಅಭ್ಯಾಸ ಮಾಡಿಕೊಂಡು ಅದನ್ನು ಪೂರ್ಣವಾಗಿ ಅರಿತವರಾಗಿದ್ದರು. ಆದುದರಿಂದ ತಮ್ಮ ಹೊಟ್ಟೆಯಿಂದ ಹುಟ್ಟಿದ ಮಗನು ವ್ಯಭಿಚಾರದಿಂದ ಹುಟ್ಟಿದವನೆಂದು ಸಂದೇಹ ಬಂದಿತು. ಜ್ಯೋತಿಷ್ಯದಲ್ಲಿ ತುಂಬಾ ವಿಶ್ವಾಸವಿದ್ದ ಇವರಿಗೆ, ಇಷ್ಟು ಕಾರಣದಿಂದ ಸಂಸಾರ ಸಾಕಾಗಿ ಮನೆ ಬಿಟ್ಟು ಅಲ್ಲಲ್ಲಿ ದೇವರ ಗುಡಿಗಳನ್ನು ಕಟ್ಟುತ್ತ ನಡೆದರು. ಹೀಗೆ ದೇವಾಲಯಗಳನ್ನು ಕಟ್ಟುತ್ತ ಬೇಲೂರಿಗೆ ಬರಲು, ವಿಷ್ಣುವರ್ಧನ ಅರಸನು ಇವರಿಂದ ಚೆನ್ನಕೇಶವ ದೇವಾಲಯವನ್ನು ಕಟ್ಟಿಸಿದನು. ಅದರಲ್ಲಿ ಚೆನ್ನಕೇಶವ ಮೂರ್ತಿಯು ಪ್ರತಿಷ್ಠೆಯನ್ನು ಮಾಡಿಸಬೇಕೆನ್ನುವಷ್ಟರಲ್ಲಿ ಹದಿನಾರು ವರ್ಷದ ಒಬ್ಬ ಹುಡುಗನು ಬಂದು, ಚೆನ್ನಕೇಶವ ಮೂರ್ತಿಯು ಅಶುದ್ಧ ಕಲ್ಲಿನಿಂದ ಮಾಡಲ್ಪಟ್ಟಿರುವದೆಂದೂ ಅದು ಪ್ರಾಣಪ್ರತಿಷ್ಠೆಗೆ ಯೋಗ್ಯವಿಲ್ಲೆಂದೂ ಸಾರಿದನು. ಜಕ್ಕಣಾಚಾರ್ಯರಿಗೂ ಹುಡುಗನಿಗೂ ವಾದ ನಡೆಯಿತು:—

ಜಕ್ಕ: ಈ ಮೂರ್ತಿಯು ಅಶುದ್ಧ ಕಲ್ಲಿನಿಂದ ಮಾಡಲ್ಪಟ್ಟಿರುವದೆಂದು ನೀನು ಹೇಗೆ ಅನ್ನುವೆ ?

ಹುಡುಗ: ಅದನ್ನು ನಾನು ಚೆನ್ನಾಗಿ ನಿರೀಕ್ಷಿಸಿ ನೋಡಿದವನಾಗಿದ್ದೇನೆ. ಅದು ನನಗೆ ಗೊತ್ತಾದ್ದರಿಂದಲೇ, ನಾನು ಅನ್ನುತ್ತೇನೆ.

ಜಕ್ಕ: ನೀನು ಅನ್ನುವಂತೆ ಈ ಮೂರ್ತಿಯ ಕಲ್ಲು ಅಶುಚಿಯೆಂದು ತೋರಿಸಿ ಕೊಟ್ಟರೆ ನನ್ನ ಬಲಗೈಯನ್ನೇ ಕಡಿದುಕೊಳ್ಳುವೆನು.

ಹುಡುಗ: ಓಹೋ ! ಅದಕ್ಕೇನು ತಡ ? ಈ ಮೂರ್ತಿಯು ಹೊಕ್ಕಳ ಭಾಗದಲ್ಲಿ ಉಸುಕು, ನೀರು ಮತ್ತು ಒಂದು ಕಪ್ಪೆ ಇರುವದು. ನಾನು ಹೇಳಿದಂತೆ ಮಾಡಿದರೆ, ಇದನ್ನು ಸಿದ್ಧ ಮಾಡಿ ತೋರಿಸುವೆನು.

ಜಕ್ಕ: ಏನು ಮಾಡಬೇಕು ?



ಶ್ರೀ ಚೆನ್ನಕೇಶವನ ಎದುರಿನಲ್ಲಿ ತಂದೆ ಮಗನ ವಾದ

ಹುಡುಗ: ಮೂರ್ತಿಯ ಮೈಗೆಲ್ಲ ಗಂಧ ಹಚ್ಚಿರಿ; ಹೊಕ್ಕಳದ ಹತ್ತಿರ ಮಾತ್ರ ಹಸಿಯುಳಿದು, ಮಿಕ್ಕಕಡೆ ಒಣಗುವದು.

ಹುಡುಗನ ಈ ದಿಟ್ಟತನದ ನುಡಿಗಳನ್ನು ಕೇಳಿ ಅರಸನೂ ನೆರೆದ ಜನರೂ ದಂಗುಬಡಿದು ಕುಳಿತರು. ಅರಸನು ಗಂಧವನ್ನು ತರಿಸಿ ಮೂರ್ತಿಯ ಮೈಗೆಲ್ಲ ಚೆನ್ನಾಗಿ ಹಚ್ಚಿಸಿದನು. ತುಸು ಹೊತ್ತಿನಲ್ಲಿಯೇ ಆ ಹುಡುಗನು ಹೇಳಿದ ಹಾಗೆಲ್ಲ ಎಲ್ಲ ಭಾಗವು ಒಣಗಿ ಹೊಕ್ಕಳದ ಹತ್ತಿರ ಸ್ವಲ್ಪ ಭಾಗವು ಹಸಿಯುಳಿಯಿತು. ಆ ಮೇಲೆ ಆ ಮೂರ್ತಿಯನ್ನು ಒಡೆದು ನೋಡಲಾಗಿ ಒಳಗೆ ಹೊಕ್ಕಳದಲ್ಲಿ ಉಸುಕು, ನೀರು ಮತ್ತು ಕಪ್ಪೆ ಇವು ಕಂಡುಬಂದವು. ಎಲ್ಲರಿಗೂ ಆಶ್ಚರ್ಯವೆನಿಸಿತು! ಹುಡುಗನ ಬುದ್ಧಿಯನ್ನು ನೆರೆದವರೆಲ್ಲರೂ ಕೊಂಡಾಡಿದರು.

ಅರಸನು: ನೀನಾರ ಮಗನು?

ಹುಡುಗ: ಜಕ್ಕಣಾಚಾರ್ಯರ ಮಗ ಡಂಕಣಾಚಾರ್ಯ. ನನ್ನ ತಂದೆಯು ಜ್ಯೋತಿಷಶಾಸ್ತ್ರದಲ್ಲಿ ವಿದ್ವಾಂಸನಿದ್ದರೂ. ಲೆಕ್ಕದಲ್ಲಿ ತಪ್ಪಿ, ನನ್ನ ತಾಯಿಯ ಮೇಲೆ ಸುಳ್ಳು ದೋಷವನ್ನು ಹೊರಿಸಿ ಬಿಟ್ಟನು!

ಮಗನ ಈ ಮುದ್ದು ಮಾತುಗಳನ್ನು ಕೇಳಿ ಜಕ್ಕಣಾಚಾರ್ಯರಿಗೆ ಹಿಡಿಸಲಾರದಷ್ಟು ಆನಂದವಾಯಿತು! ತಾನು ಮಾಡಿದ ತಪ್ಪಿಗೆ ಬಹಳ ಪಶ್ಚಾತ್ತಾಪ ಬಟ್ಟನು! ಇದನ್ನೆಲ್ಲ ಕೇಳಿ ಅರಸನಿಗೂ ಆನಂದವಾಯಿತು. ತಂದೆ–ಮಗ ಇಬ್ಬರನ್ನೂ ಮನ್ನಿಸಿ, ಅವರಿಗೆ ಹೊಸ ಚೆನ್ನಕೇಶವ ಮೂರ್ತಿಯನ್ನು ಕೆತ್ತುವ ಕೆಲಸವನ್ನು ಒಪ್ಪಿಸಿದನು.

## ಅಭ್ಯಸನಗಳು

೧. ತಂದೆ–ಮಗ ಇವರಿಬ್ಬರಲ್ಲಿ ಆದ ಸಂಭಾಷಣವನ್ನು ಬರೆಯಿರಿ.

೨. ಮೂರ್ತಿಯು ಅಶುಚಿಯೆಂದು ಡಂಕಣಾಚಾರ್ಯನು ಹೇಗೆ ಸಿದ್ಧ ಮಾಡಿ ತೋರಿಸಿದನು?

೩. ಕೆಳಗೆ ಕೆಲವು ಅಪೂರ್ಣ ವಾಕ್ಯಗಳನ್ನು ಕೊಟ್ಟಿದೆ. ಪ್ರತಿಯೊಂದು ವಾಕ್ಯದ ಕೊನೆಗೆ ಕಂಸಿನಲ್ಲಿ ಕೆಲವು ಶಬ್ದಗಳನ್ನು ಕೊಟ್ಟಿದೆ. ಅವುಗಳಲ್ಲಿ ಯೋಗ್ಯವಾದದ್ದನ್ನು ಆಯ್ದುಕೊಂಡು ವಾಕ್ಯವನ್ನು ಪೂರ್ಣವಾಗಿ ಬರೆಯಿರಿ.

(ಅ) ಜಕ್ಕಣಾಚಾರ್ಯರು...............ನ ಕಾಲದಲ್ಲಿದ್ದರು. (ಸಳ, ತೈಲಪ, ವಿಷ್ಣುವರ್ಧನ)

(ಆ) ಇವರು ದೇವಾಲಯಗಳನ್ನು ಕಟ್ಟುತ್ತ ಕಟ್ಟುತ್ತ............ಗೆ ಬಂದರು. (ಕೋಳೂರು, ಬೇಲೂರು, ತುಮಕೂರು)

(ಇ) ವಿಷ್ಣುವರ್ಧನನು ಇವರಿಂದ...............ನ ದೇವಾಲಯವನ್ನು ಕಟ್ಟಿಸಿದನು. (ಚೆನ್ನಕೇಶವ, ಆದಿಕೇಶವ, ವೀರಕೇಶವ)

(ಈ) ...........ವರುಷದ ಹುಡುಗನೊಬ್ಬನು ಬಂದು ಮೂರ್ತಿಯು ಅಶುದ್ಧವೆಂದು ಹೇಳಿದನು. (ಹದಿನೆಂಟು, ಹದಿನೇಳು, ಹದಿನಾರು)

(ಉ) ಜಕ್ಕಣಾಚಾರ್ಯರು ತಮ್ಮೊರಲ್ಲಿ...............ಶಾಸ್ತ್ರವನ್ನು ಚೆನ್ನಾಗಿ ಅಭ್ಯಾಸ ಮಾಡಿದ್ದರು. (ತರ್ಕ, ಆಯುರ್ವೇದ, ಜ್ಯೋತಿಷ)

## ೧೪. ಬಿಜ್ಜಳನು

ಇವನು ಕಲಚೂರಿ ಮನೆತನದವನು. ಕಲ್ಯಾಣದ ಚಾಲುಕ್ಯ ಮನೆತನದ ಮುಮ್ಮಡಿ ತೈಲಪನ ದಂಡನಾಯಕನಾಗಿದ್ದನು. ಇವನ ಆಳಿಕೆಯಲ್ಲಿ ಬಿಜ್ಜಳನಿಗೆ ಪಟ್ಟಕ್ಕೆ ಕೂಡ್ರಲು ಅನುವಾಯಿತು. ಯಾಕಂದರೆ ಬಿಜ್ಜಳನು ಶೂರ; ತೈಲಪನು ಹೇಡಿ. ಅಂದಮೇಲೆ ಕೇಳುವದೇನು? ಬಿಜ್ಜಳನು ಕೊಲ್ಲಾಪುರದ ಮಹಾ ಮಂಡಲೇಶ್ವರನನ್ನೂ ಓರಂಗಲ್ಲಿನ ಕಾಕತೀಯರನ್ನೂ ತನ್ನ ಕಡೆಗೆ ಒಲಿಸಿಕೊಂಡು, ಚಾಲುಕ್ಯರ ಪಟ್ಟವನ್ನು ಹಿಡಿದುಕೊಂಡನು. ತೈಲಪನು ಅಂಜಿ ಅಣ್ಣೀಗೇರಿಗೆ ಹೋಗಿ, ಅಲ್ಲಿ ಕೆಲ ದಿನ ಇದ್ದನು. ಆದರೆ ಬಿಜ್ಜಳನು ಅವನಿಗೆ ಅಲ್ಲಿಯೂ ಇರಗೊಡದ್ದರಿಂದ, ಮುಂದೆ ಬನವಾಸಿಗೆ ಹೋಗಿ ಇದ್ದನು.

ಇವನು ಜೈನನು. ಸ್ವಭಾವದಿಂದ ಮಹಾ ತಂತ್ರಗಾರ ಮತ್ತು ಶೂರ. ಇವನ ಆಳಿಕೆಯಲ್ಲಿ ಬಲದೇವನೆಂಬವನು ಮಂತ್ರಿಯಾಗಿದ್ದನು. ಈ ಬಲದೇವ ಮಂತ್ರಿಯು ಸೋದರಳಿಯಂದಿರು ಶ್ರೀ ಬಸವಣ್ಣನವರು. ಇವರು ಸಿದ್ದಣ್ಣನೆಂಬ ಮತ್ತೊಬ್ಬ ಮಂತ್ರಿಯ ಕೈಕೆಳಗೆ ಲೆಕ್ಕ ಬರೆಯುವ ಕಾರಕೂನರಾಗಿ ಕೆಲಸ ಮಾಡುತ್ತಿದ್ದರು. ಬಸವಣ್ಣನವರ ಶುದ್ಧ ಆಚರಣೆ ಸತ್ಯನಿಷ್ಠೆ ಗಳಿಗೆ



ಬಸವಣ್ಣನವರು ಬಿಜ್ಜಳನ ಎದುರಿನಲ್ಲಿ ಲಿಪಿಯನ್ನು ಓದುತ್ತಿರುವದು

